**IN THE COURT OF THE 11th ADDITIONAL CHIEF MERTOPOLITAN MAGISTRATE, BANGALORE CITY, DATE: 20th JULY 2007**

It is here by notified for the information of the public that the under mentioned vehicles which are in the custody of Frazer Town Police Station, Bangalore City has unclaimed shall be confiscated to the Government and disposed to law, if not claimed by the owner with proof of ownership within 3 months from the date of the Publication of this notification.

| Sl.No. | C misc No. | P.F. No. & Date | Vehicle No. | Nature of Property |
|---|---|---|---|---|
| 1 | 80/07 | 73/07<br>11.03.07 | KA 01 Q 4506<br>ENG NO. 166001331<br>CHA NO. 9801L6-001334 | Yamaha RX-135 |
| 2 | 95/07 | 85/07<br>14.03.07 | KA 01 X 8307<br>ENG NO. 05A27E1482<br>CHA NO. 05827F15505 | Hero Honda Splendor |
| 3 | 89/07 | 79/07<br>13.03.07 | KA 01 H 2150<br>ENG NO. E30CL052957<br>CHA NO. C30CL053820 | Bajaj KB-100 |
| 4 | 90/07 | 80/07<br>13.03.07 | KA 05 EP 4298<br>ENG NO. 03H18MO5935<br>CHA NO. 03H20C45703 | Hero Honda Splendor |
| 5 | 86/07 | 76/07<br>13.03.07 | KA 04 H 6155<br>ENG NO. NIEGL266299<br>CHA NO. 2744 | Kinetic Honda |
| 6 | 76/07 | 69/07<br>11.03.07 | KA 04 J 1446<br>ENG NO. 324713NILHL<br>CHA NO. 024481 | Kinetic Honda |
| 7 | 87/07 | 77/07<br>13.03.07 | KA 04 Q 1693<br>ENG NO. 33M95HO7117<br>CHA NO. 33F93807195 | Bajaj Sunny |
| 8 | 74/07 | 67/07<br>11.03.07 | CKD 9040<br>ENG NO. 10E070301<br>CHA NO. 074085 | Bajaj Super |
| 9 | 78/07 | 71/07<br>11.03.07 | CAY 4924<br>ENG NO. D804M03207<br>CHA NO. D804F036305 | T.V.S. Champ |
| 10 | 72/07 | 65/07<br>11.03.07 | CAO 308<br>ENG NO. A601M229637<br>CHA NO. (Not Available) | T.V.S. 50 XL |
| 11 | 88/07 | 78/07<br>13.03.07 | CAY 145<br>ENG NO. NIL2338511<br>CHA NO. (Not Available) | Kinetic Honda |
| 12 | 93/07 | 83/07<br>14.03.07 | CAP 4099<br>ENG NO. KL136581<br>CHA NO. (Not Available) | Kinetic Luna |
| 13 | 51/07 | 29/07<br>09.02.07 | CAY 211<br>ENG NO. (Not Available)<br>CHA NO. 23668-11-87 | T.V.S. Champ |
| 14 | 319/06 | 201/06<br>30.10.06 | KA 03 V 7048<br>ENG NO. 7410M-491693<br>CHA NO. 2410P-449261 | Suzuki Samurai |
| 15 | 325/06 | 206/06<br>31.10.06 | KA 03 H 1960<br>ENG NO. A811M9958<br>CHA NO. A811F013783 | T.V.S. 50 |
| 16 | 326/06 | 207/06<br>31.10.06 | KA 03 U 6463<br>ENG NO. F706 M 651<br>CHA NO. A70616671384 | T.V.S. XL |

| Sl.No. | C misc No. | P.F. No. & Date | Vehicle No. | Nature of Property |
|---|---|---|---|---|
| 17 | 380/06 | 229/06<br>08.12.06 | KA 03 E 8551<br>ENG NO. 067821<br>CHA NO. 054580 | Bajaj Chethak |
| 18 | 388/06 | 238/06<br>12.12.06 | KA 03 I 8277<br>ENG NO. (Not Available)<br>CHA NO. (Not Available) | Kinetic GX |
| 19 | 322/06 | 204/06<br>30.10.06 | KA 03 S 6880<br>ENG NO. A703F5805<br>CHA NO. A7057697353 | T.V.S. XL |
| 20 | 351/06 | 217/06<br>21.11.06 | KA 02 E 8814<br>ENG NO. (Not Available)<br>CHA NO. (Not Available) | T.V.S. Victor |
| 21 | 383/06 | 232/06<br>08.12.06 | KA 05 J 8903<br>ENG NO. EB 57586<br>CHA NO. EB 58863 | Hero Puch |
| 22 | 314/06 | 197/06<br>28.10.06 | KA 04 L 5225<br>ENG NO. 546997<br>CHA NO. 2504 F50385 | Suzuki Samurai |
| 23 | 336/06 | 212/06<br>10.11.06 | MEE 3611<br>ENG NO. 3E063243166<br>CHA NO. 03C60320542 | Bajaj Scooter |
| 24 | 381/06 | 230/06<br>08.12.06 | CAZ 3599<br>ENG NO. IOI156981<br>CHA NO. 1001585567 | Bajaj Scooter |
| 25 | 384/06 | 233/06<br>09.12.06 | C.K.P. 8244<br>ENG NO. 152010<br>CHA NO. (Not Available) | Scooter |
| 26 | 385/06 | 234/06<br>09.12.06 | CAI 1312<br>ENG NO. (Not Available)<br>CHA NO. (Not Available) | T.V.S. 50 |
| 27 | 382/06 | 231/06<br>08.12.06 | KA 03 Y 8730<br>ENG NO. CDBBFH11377<br>CHA NO. 06BBFH23430 | Bajaj Scooter |

By the court order
P.R.1041
11th Additional Chief Metropolitan Magistrate Court,
Bangalore.

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ–ಉಪ–ವಿಭಾಗ, ಮಧುಗಿರಿ ಇವರ ಕಛೇರಿ ನಡವಳಿಕೆಗಳು

### ಅಮಲ್ಜಾರಿ ಅರ್ಜಿ ಸಂಖ್ಯೆ: ಎ.ಆರ್.ಇ:ಯು.ಬಿ.ಎಫ್/14708:2005–06

ಡಿಕ್ರಿ ಹೋಲ್ಡರ್: ವಿರುದ್ಧ ತೀರ್ಪುಋಣಿ:

ಪ್ರಧಾನ ವ್ಯವಸ್ಥಾಪಕರು
ಟೌನ್ ಕೋ–ಆಪರೇಟೀವ್ ಬ್ಯಾಂಕ್ ಲಿ. ಶಿರಾ, ತುಮಕೂರು ಜಿಲ್ಲೆ.

ಎಸ್.ಈ. ಸಿದ್ದಪ್ಪ ಬಿನ್ ಈರಸಿದ್ದಪ್ಪ
ನಾಯಕರ ಹಟ್ಟಿ, ಶಿರಾ.

ಪ್ರಸ್ತಾವನೆ:

ಪ್ರಧಾನ ವ್ಯವಸ್ಥಾಪಕರು ಟೌನ್ ಕೋ–ಆಪರೇಟೀವ್ ಬ್ಯಾಂಕ್ ಲಿ., ಶಿರಾ ತುಮಕೂರು ಜಿಲ್ಲೆ ಇವರು ತೀರ್ಪು ಋಣಿಯಿಂದ ವಸೂಲಾಗಬೇಕಾದ ಆಧಾರದ ಸಾಲ ರೂ.76421=00 ದಾವಾ ಶುಲ್ಕ ರೂ.1120=00 ಮತ್ತು ಮುಂದುವರೆದ ಬಡ್ಡಿ ಇತರೆ ಖರ್ಚುಗಳಿಗೆ ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು (ನಿಯಮ 441) ದಾವಾ ಪಂಚಾಯ್ತಿ ಕರ್ನಾಟಕ ರಾಜ್ಯ ಸಹಕಾರ ಪಟ್ಟಣ, ಬ್ಯಾಂಕುಗಳ ಮಹಾಮಂಡಳ ನಿಯಮಿತ ಬೆಂಗಳೂರು ಇವರ ನ್ಯಾಯಾಲಯದಲ್ಲಿ ದಾವಾ ಹೂಡಿ ಡಿಕ್ರಿ ಪಡೆದು ಅಮಲ್ಜಾರಿ ಅರ್ಜಿ ಹಾಕಿದ್ದು ಸದರಿ ಅಮಲ್ಜಾರಿ ಅರ್ಜಿ ಸಂಖ್ಯೆ 14708/2005–06 ಮೊಬಲಗು ರೂ.79508=00ರ ಪ್ರಕರಣವನ್ನು ಸದರಿ ಬ್ಯಾಂಕಿನ ನಿಯಮ 441 ಮಾರಾಟಾಧಿಕಾರಿಯವರಿಗೆ ಅಮಲ್ಜಾರಿಗೆ ವಹಿಸಲಾಗಿತ್ತು. ಈಗ ದಿನಾಂಕ: 13.03.2007 ಕ್ಕೆ ರೂ.104963=00 ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ತೀರ್ಪು ಋಣಿದಾರರಿಂದ ಬರಬೇಕಾಗಿರುತ್ತದೆ.

ಮಾರಾಟಾಧಿಕಾರಿಗಳು ತೀರ್ಪು ಋಣಿಯ ಸ್ಥಿರ ಸ್ವತ್ತುಗಳನ್ನು ದಿನಾಂಕ: 14.03.2007 ರಂದು ಬಹಿರಂಗ ಹರಾಜಿನಲ್ಲಿ ಅತ್ಯಧಿಕ ಬಿಡ್ಡುದಾರರಾದ ಶ್ರೀಮತಿ ಪುಟ್ಟಮ್ಮ ಕೋಂ ಬಿ.ಸಿ.ರಂಗಶಾಮಯ್ಯ, ನಾಯಕರ ಹಟ್ಟಿ, ಶಿರಾ ಇವರಿಗೆ

ನಿವೇಶನವನ್ನು ರೂ.183500=00 (ರೂಪಾಯಿಗಳು ಒಂದು ಲಕ್ಷದ ಎಂಬತ್ಮೂರು ಸಾವಿರದ ಐದು ನೂರುಗಳು ಮಾತ್ರ) ಗಳಿಗೆ ಮಾರಾಟ ಮಾಡಿ ಹರಾಜು ಸ್ಥಿರೀಕರಣಕ್ಕಾಗಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಸ್ವತ್ತು ಹರಾಜದ 30 ದಿವಸಗಳ ಒಳಗೆ ಆಸ್ತಿಯ ಒಡೆತನವನ್ನು ಹೊಂದಿರುವ ಅಥವಾ ಆಸ್ತಿಯ ಹಿತಾಸಕ್ತಿ ಹೊಂದಿರುವ ವ್ಯಕ್ತಿಗಳಿಂದ ಸಹಕಾರಿ ಕಾಯಿದೆ ನಿಯಮ 38(4)(ಎ) ರೀತಿ ನಿಯಮಾನುಸಾರ ಠೇವಣಿ ಮಾಡಿ ಮಾರಾಟವನ್ನು ರದ್ದುಗೊಳಿಸುವಂತೆ ಕೋರಿ ಯಾವ ವಿಧವಾದ ಅರ್ಜಿಯು ಬಂದಿಲ್ಲದ ಪ್ರಯುಕ್ತ ಸದರಿ ಸ್ಥಿರಾಸ್ತಿಯನ್ನು ಅತ್ಯಧಿಕ ಹಾಗೂ ಅಂತಿಮ ಬಿಡ್ಡುದಾರರ ಹೆಸರಿಗೆ ಸ್ಥಿರೀಕರಣಗೊಳಿಸಬೇಕಾಗಿದೆ. ಆದುದರಿಂದ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಸ.ಸಂ.ಸ.ನಿ 33:ಎಬಿಎನ್:ಎಸ್‌ಸಿ:28:2007–08, ದಿನಾಂಕ: 24ನೇ ಜುಲೈ 2007**

ಹೆಚ್.ಡಿ.ಶಿವಣ್ಣ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪ ವಿಭಾಗ, ಮಧುಗಿರಿ ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಬಂಧನೆಗಳ 1960ರ ನಿಯಮ 38(6)(ಎ) ಪ್ರಕಾರ ನನಗೆ ದತ್ತವಾಗಿರುವ ಅಧಿಕಾರದ ಮೇರೆಗೆ ಶಿರಾ ಟೌನ್ ಕೋ–ಆಪರೇಟೀವ್ ಬ್ಯಾಂಕ್ ಲಿ., ಶಿರಾ ಇವರಿಗೆ ತೀರ್ಪು ಋಣಿಗಳಾದ ಶ್ರೀ ಎಸ್.ಈ.ಸಿದ್ದಪ್ಪ ಬಿನ್ ಈರಸಿದ್ದಪ್ಪ, ನಾಯಕರ ಹಟ್ಟಿ, ಶಿರಾ ಟೌನ್ ಇವರ ಷೆಡ್ಯೂಲ್‌ನಲ್ಲಿ ವಿವರಿಸಲಾದ ಸ್ಥಿರಾಸ್ತಿಗಳನ್ನು ದಿನಾಂಕ: 14.3.2007 ರಂದು ನಡೆದ ಬಹಿರಂಗ ಹರಾಜಿನಲ್ಲಿ ಅತ್ಯಧಿಕ ಬಿಡ್‌ದಾರರಾದ ಶ್ರೀಮತಿ ಪುಟ್ಟಮ್ಮ ಕೋಂ ಬಿ.ಸಿ.ರಂಗಶಾಮಯ್ಯ, ನಾಯಕರ ಹಟ್ಟಿ, ಶಿರಾ ಇವರ ಹೆಸರಿಗೆ ಸ್ಥಿರಿಕರಿಸಿ ಆದೇಶಿಸಿರುತ್ತೇನೆ.

ಬಹಿರಂಗ ಹರಾಜಿನಲ್ಲಿ ಬಿಡ್ಡುದಾರ ಶ್ರೀಮತಿ ಪುಟ್ಟಮ್ಮ ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ಪಾವತಿಸಿದ ರೂ.183500=00 ಗಳಲ್ಲಿ ಡಿಕ್ರಿ ಹೋಲ್ಡರ್ ಬ್ಯಾಂಕ್ ಮಾರಾಟದ ಘೋಷಣೆಯಲ್ಲಿ ಯಾವ ಮೊಬಲಗಿನ ವಸೂಲಾತಿಯ ಸಲುವಾಗಿ ಮಾರಾಟವು ಆದೇಶ ಮಾಡಲ್ಪಟ್ಟಿತೋ ಆ ಮೊಬಲಗನ್ನು ಮತ್ತು ಅದರ ಮೇಲಿನ ಬಡ್ಡಿ ಮತ್ತು ಜಪ್ತಿ ವೆಚ್ಚಗಳನ್ನು ತೀರ್ಪುಋಣಿ ಶ್ರೀ ಎಸ್.ಈ.ಸಿದ್ದಪ್ಪ ಬಿನ್ ಈರಸಿದ್ದಪ್ಪ, ನಾಯಕರ ಹಟ್ಟಿ, ಶಿರಾ ಇವರ ಸಾಲದ ಖಾತೆಗೆ ಜಮಾ ತೆಗೆದುಕೊಂಡು ಲೆಕ್ಕ ಮಾಡಿಕೊಳ್ಳಲು ಪ್ರಧಾನ ವ್ಯವಸ್ಥಾಪಕರಿಗೆ ಆದೇಶಿಸಿದೆ.

**ಸ್ಥಿರ ಸ್ವತ್ತುಗಳ ವಿವರ**

ಶಿರಾಟೌನ್ ನಾಯಕರ ಹಟ್ಟಿಯಲ್ಲಿರುವ ಆಸೆಸ್‌ಮೆಂಟ್ ನಂ.789:5550 ವಿಸ್ತೀರ್ಣ45.5X$\frac{30+40}{2}$ ಅಡಿಗಳುಳ್ಳ ನಿವೇಶನ ಈ ನಿವೇಶನಕ್ಕೆ ಚೆಕ್ಕುಬಂದಿ ಪೂರ್ವಕ್ಕೆ ಕನ್ಸರ್‌ವೆನ್ಸಿ, ಪಶ್ಚಿಮಕ್ಕೆ ರಸ್ತೆ, ಉತ್ತರಕ್ಕೆ ಡ್ರೈನೇಜ್, ದಕ್ಷಿಣಕ್ಕೆ ಗಂಗೋಜಿರಾವ್ ಮನೆ.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮೊಹರಿನೊಂದಿಗೆ 2007ನೇ ಇಸವಿ ಜುಲೈ ತಿಂಗಳು 24 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಮಧುಗಿರಿ ಉಪ–ವಿಭಾಗ, ಮಧುಗಿರಿ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ–ಉಪ–ವಿಭಾಗ, ಮಧುಗಿರಿ ಇವರ ಕಛೇರಿ ನಡವಳಿಕೆಗಳು**
**ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38(7)ರ ಅನ್ವಯ ನೀಡಿದ ಮಾರಾಟ ದೃಢೀಕರಣ ಪತ್ರ**
**ಅಮಲ್ಜಾರಿ ಅರ್ಜಿ ಸಂಖ್ಯೆ: ಎ.ಆರ್.ಇ:ಯು.ಬಿ.ಎಫ್/14708:2005–06**

**ಉಪಸ್ಥಿತರು: ಹೆಚ್.ಡಿ. ಶಿವಣ್ಣ**
ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ–ಉಪ–ವಿಭಾಗ, ಮಧುಗಿರಿ.

| **ಡಿಕ್ರಿ ಹೋಲ್ಡರ್:** | **ವಿರುದ್ಧ** | **ತೀರ್ಪುಋಣಿ:** |
|---|---|---|
| ಪ್ರಧಾನ ವ್ಯವಸ್ಥಾಪಕರು<br>ಟೌನ್ ಕೋ–ಆಪರೇಟೀವ್ ಬ್ಯಾಂಕ್ ಲಿ. ಶಿರಾ,<br>ತುಮಕೂರು ಜಿಲ್ಲೆ. | | ಎಸ್.ಈ. ಸಿದ್ದಪ್ಪ ಬಿನ್ ಈರಸಿದ್ದಪ್ಪ<br>ನಾಯಕರ ಹಟ್ಟಿ, ಶಿರಾ. |

**ಪ್ರಸ್ತಾವನೆ:**

ಪ್ರಧಾನ ವ್ಯವಸ್ಥಾಪಕರು ಟೌನ್ ಕೋ–ಆಪರೇಟೀವ್ ಬ್ಯಾಂಕ್ ಲಿ., ಶಿರಾ ತುಮಕೂರು ಜಿಲ್ಲೆ ಇವರು ದಿನಾಂಕ: 14.12.2005 ರಂದು ಪಡೆದ ಡಿಕ್ರಿ ನಂ. ಜೆಆರ್‌ಡಿ:ಯು.ಬಿ.ಎಫ್/7281/2005–06ರ ಪ್ರಕಾರ ದಿನಾಂಕ: 23.01.2006 ರಂದು ಸಿ.ಇ.ಪಿ.ನಂ. ಎ.ಆರ್‌ಇ/ಯು.ಬಿ.ಎಫ್:14708:2005–06ರ ಪ್ರಕಾರ ಅಮಲ್ಜಾರಿ ಪಡೆದು ಡಿಕ್ರಿ ಹೋಲ್ಡರ್ ಬ್ಯಾಂಕಿನ ಮಾರಾಟಾಧಿಕಾರಿಯು ಮೇಲ್ಕಂಡ ತೀರ್ಪುಋಣಿದಾರರಾದ ಎಸ್.ಈ.ಸಿದ್ದಪ್ಪ, ಬಿನ್ ಈರಸಿದ್ದಪ್ಪ ನಾಯಕರ ಹಟ್ಟಿ, ಶಿರಾ ಇವರು ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ಆಧಾರ ಮಾಡಿದ್ದ ಈ ಕೆಳಕಂಡ ಸ್ಥಿರಾಸ್ತಿಯನ್ನು ದಿನಾಂಕ: 14.03.2007 ರಂದು ಟೌನ್ ಕೋ–ಆಪರೇಟೀವ್ ಬ್ಯಾಂಕ್ ಲಿ., ಶಿರಾ ಈ ಬ್ಯಾಂಕಿಗೆ ಬರಬೇಕಾದ ಸುಸ್ತಿ ಸಾಲದ ವಸೂಲಿ ಬಗೆಗೆ ಬಹಿರಂಗ ಹರಾಜು ನಡೆಸಿರುತ್ತಾರೆ.

ಈ ಬಹಿರಂಗ ಹರಾಜಿನಲ್ಲಿ ತೀರ್ಪು ಋಣಿಯ ಸ್ಥಿರಸ್ವತ್ತನ್ನು ಶ್ರೀಮತಿ ಪುಟ್ಟಮ್ಮ, ಕೋಂ ಬಿ.ಸಿ.ರಂಗಶ್ಯಾಮಯ್ಯ, ನಾಯಕರ ಹಟ್ಟಿ, ಶಿರಾ ತುಮಕೂರು ಜಿಲ್ಲೆ ಇವರು ರೂ.183500=00 (ಒಂದು ಲಕ್ಷದ ಎಂಭತ್ಮೂರು ಸಾವಿರದ ಐದು ನೂರು

ಮಾತ್ರ) ಗಳ ಅತಿ ಹೆಚ್ಚಿನ ಬಿಡ್ ಮೊತ್ತಕ್ಕೆ ಕೊಂಡಿರುತ್ತಾರೆ ಎಂದು ಈ ಮೂಲಕ ದೃಢೀಕರಿಸಿದೆ. ಆದ್ದರಿಂದ ಈ ಸ್ಥಿರಾಸ್ತಿಯ ಹರಾಜನ್ನು ಬಿಡ್‌ದಾರರಾದ ಶ್ರೀಮತಿ ಪುಟ್ಟಮ್ಮ, ಕೋಂ ಬಿ.ಸಿ.ರಂಗಶ್ಯಾಮಯ್ಯ ಇವರ ಹೆಸರಿಗೆ ಸ್ಥಿರೀಕರಣ ಗೊಳಿಸಿದೆ.

ಸ್ಥಿರಾಸ್ತಿಯ ವಿವರ

| ಕ್ರ. ಸಂ. | ಗ್ರಾಮ ಮತ್ತು ತಾಲ್ಲೂಕು | ಸ್ಥಿರ ಸ್ವತ್ತುಗಳ ವಿವರ ತರಹೆ | ಖಾವೇಷು ಮಾರಿ ನಂ. | ಖಾತೆದಾರನ ಹೆಸರು | ವಿಸ್ತೀರ್ಣ | ಚೆಕ್ಕುಬಂದಿ |
|---|---|---|---|---|---|---|
| 1 | ನಾಯಕರ ಹಟ್ಟಿ, ಶಿರಾ ಟೌನ್ | ನಿವೇಶನ | 789:5550 | ಎಸ್.ಈ.ಸಿದ್ದಪ್ಪ ಬಿನ್ ಈರಸಿದ್ದಪ್ಪ ನಾಯಕರ ಹಟ್ಟಿ, ಶಿರಾ | 45.50X(30+40)/2 ಅಡಿಗಳು | ಪೂರ್ವಕ್ಕೆ: ಕನ್ಸರ್‌ವೆನ್ಸಿ<br>ಪಶ್ಚಿಮಕ್ಕೆ: ರಸ್ತೆ<br>ಉತ್ತರಕ್ಕೆ: ಡ್ರೈನೇಜ್<br>ದಕ್ಷಿಣಕ್ಕೆ: ಗಂಗೋಜಿರಾವ್ ಮನೆ |

ಮಾರಾಟದ ಮೊತ್ತ ರೂ.183500=00

ಮಾರಾಟದ ದಿನಾಂಕ: 14.03.2007

ನಿಗದಿತ ಮುದ್ರಾಂಕ ಶುಲ್ಕ ರೂ.15414=00

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮೊಹರಿನೊಂದಿಗೆ ಈ ದಿನ ದಿನಾಂಕ: 24.07.2007 ರಂದು ನೀಡಿರುತ್ತೇನೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಮಧುಗಿರಿ ಉಪ–ವಿಭಾಗ, ಮಧುಗಿರಿ.

ಪಿ.ಆರ್. 1040

## COMMERCIAL TAXES DEPARTMENT

## COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 3-A(2) OF THE KARNATAKA SALES TAX ACT, 1957

**Sub:** KST Act, 1957-Clarification under Section 3-A(2) regarding rate of tax applicable on 'stoneware pipes' for the year 2003-04.

**Ref:** Application dated: 05.05.2007 of Sri. V. Venkatesh, Executive Director, M/s Bangalore Silk and Silicates Pvt. Ltd., No.12, Anekallappa Lane, Narayanasettypet, 26th Cross, Cubbonpet, Bangalore-560 002.

In his application dated 05.05.2007 cited above, Sri V. Venkatesh, Executive Director, M/s Bangalore Silk and Silicates Pvt. Ltd., No.12, Anekallappa Lane, Narayanasettypet, 26th Cross, Cubbonpet, Bangalore-560 002 has sought clarification regarding rate of tax applicable on 'stoneware pipes' for the year 2003-04 under the Karnataka Sales Tax Act, 1957.

2. Section 3-A(2) of the Karnataka Sales Tax Act, 1957 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purposes of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO. CLR.CR.35/07-08, DATED: 10th JULY 2007**

It is hereby clarified that 'stoneware pipes' fall under entry Sl.No.6 of Part P of Second Schedule to the Karnataka Sales Tax Act, 1957 and taxable at 12% from 01.04.2003 to 31.05.2003 and 13% from 01.06.2003 to 31.03.2004 under Section 5(3)(a) of the Karnataka Sales Tax Act, 1957.

**B.A. HARISH GOWDA**
Commissioner of Commercial Taxes,
(Karnataka), Bangalore.

P.R. 1037

## COMMERCIAL TAXES DEPARTMENT

## COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003

**Sub:** KVAT Act 2003-Clarification under Section 59(4) regarding the tax applicable on 'old motor vehicles/old mopeds/motor cycles, unserviceable tyres with tubes, unserviceable spare parts (Automobile), used engine oil with drums, used empty oil drums, paint tins and plastic cans'.

**Ref:** Application dated: 13.06.2007 of Sri B. Vijayakumar, Manager, Mail Motor Service, Department of Posts, Bangalore-560 052.

In his application dated 13.06.2007 cited above, Sri B. Vijayakumar, Manager, Mail Motor Service, Department of Posts, Bangalore-560 052 have sought clarification regarding rate of tax applicable on 'old motor vehicles/old mopeds/motor cycles, unserviceable tyres with tubes, unserviceable spare parts (Automobile), used engine oil with drums, used empty oil drums, paint tins and plastic cans'.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purposes of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO. CLR.CR.88/07-08, DATED: 10th JULY 2007**

It is hereby clarified that rate of tax on the following commodities are as follows:

| Sl.No. | Commodity | Rate of tax/Notification |
|---|---|---|
| 1 | Old motor vehicles/old mopeds/motor cycles | 4% as per Notification No. FD 115 CSL 2007(4) dated: 30.03.2007, subject to the conditions specified therein. |
| 2 | Unserviceable tyres with tubes | 12.5% under Section 4(1)(b) of the Karnataka Value Added Tax Act, 2003. |
| 3 | Unserviceable spare parts (Automobile) | 12.5% under Section 4(1)(b) of the Karnataka Value Added Tax Act, 2003. |
| 4 | Used engine oil with drums | 12.5% under Section 4(1)(b) of the Karnataka Value Added Tax Act, 2003. |
| 5 | Used empty oil drums, paint tins and plastic cans | 4% as per Notification No. FD 197 CSL 2005(5), dated: 30.04.2005, vide Sl.No.200. |

**B.A. HARISH GOWDA**

P.R. 1038

Commissioner of Commercial Taxes,
(Karnataka), Bangalore.

**COMMERCIAL TAXES DEPARTMENT**

**COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act 2003-Clarification under Section 59(4) regarding the tax applicable on 'batteries' supplied to railways.

**Ref:** Application dated: 12.06.2007 of M/s Kirloskar Batteries Pvt. Limited, Post Box No.2231, Yeshwanthpur, Bangalore-560 022.

In their application dated: 12.06.2007 cited above, M/s Kirloskar Batteries Pvt. Limited, Post Box No.2231, Yeshwanthpur, Bangalore-560 022 has sought clarification regarding rate of tax applicable on 'batteries' supplied to railways.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purposes of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO. CLR.CR.43/07-08, DATED: 10th JULY 2007**

It is hereby clarified that 'batteries' supplied to railways are not covered under entry Sl.No.76 of Third Schedule to the Karnataka Value Added Tax Act, 2003, but taxable at 12.5% under Section 4(1)(b) of the Karnataka Value Added Tax Act, 2003.

**B.A. HARISH GOWDA**

P.R. 1039

Commissioner of Commercial Taxes,
(Karnataka), Bangalore.

**ಶಿಕ್ಷಣ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಇಡಿ 299 ಡಿಪಿಐ 2007, ಬೆಂಗಳೂರು–1, ದಿನಾಂಕ: 24ನೇ ಜುಲೈ 2007**

ಸಾರ್ವಜನಿಕ ಶಿಕ್ಷಣ ಇಲಾಖೆಯ, ಗ್ರೂಪ್–ಬಿ ವೃಂದದ ಪತ್ರಾಂಕಿತ ಸಹಾಯಕರು ಹಾಗೂ ತತ್ಸಮಾನ ವೃಂದದ ಈ ಕೆಳಕಂಡ ಅಧಿಕಾರಿಗಳಿಗೆ ವೇತನ ಶ್ರೇಣಿ ರೂ.14050–25050ರ ಗ್ರೂಪ್–ಎ ಕಿರಿಯ ವೇತನ ಶ್ರೇಣಿಯ ಹಿರಿಯ ಸಹಾಯಕ ನಿರ್ದೇಶಕರು (ಬೋಧಕೇತರ) ವೃಂದದ ಹುದ್ದೆಗೆ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸ್ಥಾನಪನ್ನ ಬಡ್ತಿ ನೀಡಿ ಅವರುಗಳ ಹೆಸರಿನ ಮುಂದೆ ಸೂಚಿಸಲಾಗಿರುವ ಹುದ್ದೆ ಮತ್ತು ಸ್ಥಳಗಳಿಗೆ ನೇಮಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಹೆಸರು ಮತ್ತು ಹಾಲಿ ಕಾರ್ಯ ನಿರ್ವಹಿಸುತ್ತಿರುವ ಸ್ಥಳ ಶ್ರೀ/ಶ್ರೀಮತಿ | ಬಡ್ತಿ ಮೂಲಕ ಸ್ಥಳ ನಿಯುಕ್ತಿಗೊಳಿಸಿದ ಹುದ್ದೆ ಮತ್ತು ಸ್ಥಳ |
|---|---|---|
| 1 | ಕೆ.ವಿ.ರಂಗಣ್ಣ, ಪತ್ರಾಂಕಿತ ಸಹಾಯಕರು, ಉಪ ನಿರ್ದೇಶಕರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಮಂಗಳೂರು, ದಕ್ಷಿಣ ಕನ್ನಡ ಜಿಲ್ಲೆ. | ಹಿರಿಯ ಸಹಾಯಕ ನಿರ್ದೇಶಕರು, ಸಹ ನಿರ್ದೇಶಕರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಮೈಸೂರು ವಿಭಾಗ, ಮೈಸೂರು. |
| 2 | ಎಂ.ಪಿ.ಬೊಳ್ಳಮ್ಮ, ಪತ್ರಾಂಕಿತ ಸಹಾಯಕರು, ಉಪ ನಿರ್ದೇಶಕರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ. | ಹಿರಿಯ ಸಹಾಯಕ ನಿರ್ದೇಶಕರು, ಆಯುಕ್ತರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು. |

ಸದರಿ ಅಧಿಕಾರಿಗಳು ಪ್ರಸ್ತುತ ಕರ್ತವ್ಯದಿಂದ ದಿನಾಂಕ: 30.07.2007 ರೊಳಗಾಗಿ ಬಿಡುಗಡೆ ಹೊಂದಿ ನಿಯಮಾನುಸಾರ ಇವರ ಸೇರುವಿಕೆ ಕಾಲದ ಒಳಗಾಗಿ ಅಥವಾ ಪ್ರಸ್ತುತ ಸೇವೆಯಿಂದ ಬಿಡುಗಡೆಗೊಳಿಸಿದ ಮಾರನೇ ದಿನ ಸ್ಥಳ ನೇಮಕಾತಿ ಸೂಚಿಸಿರುವ ಸ್ಥಳಗಳಲ್ಲಿ ಕರ್ತವ್ಯಕ್ಕೆ ಹಾಜರಾಗಿ ಸರ್ಕಾರವನ್ನು ಒಳಗೊಂಡಂತೆ ಸಂಬಂಧಪಟ್ಟವರೆಲ್ಲರಿಗೂ ವರ್ಗಾವಣಾ ಪ್ರಪತ್ರವನ್ನು ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸ್ವರ್ಣಲತಾ ಎಂ. ಭಂಡಾರೆ**

ಪಿ.ಆರ್. 1046 ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಸೇವೆಗಳು–1,2).

**COMMERCIAL TAXES DEPARTMENT**

**COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act 2003-Clarification under Section 59(4) regarding the rate of tax on 'PVC insulated copper and aluminium cable'.

**Ref:** Application dated: 23.5.2007 of M/s. Varsha Cables Pvt. Ltd., No.35-A-1 to A-6, Hootagalli Industrial Area, DIC Layout, Mysore-570018.

In their application cited at reference above, the applicant has sought clarification regarding the rate of tax applicable on 'PVC insulated copper and aluminium cable'.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purposes of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO. CLR.CR.22/07-08, DATED: 25th JULY 2007**

It is hereby clarified that,

a. 'PVC insulated copper and aluminium cable' upto 6 sq mm for use upto 1100 Volts for whatever purpose is taxable at 12.5% under Section 4(1) (b) of the Karnataka Value Added Tax Act, 2003.

b. 'PVC insulated copper and aluminium single core cable' above 6 sq.mm, and 'PVC insulated copper and aluminium multicore cable' are taxable at 4% under entry sl.no.52 of the Third Schedule to the Karnataka Value Added Tax Act, 2003.

**B.A. HARISH GOWDA**

P.R. 1044 Commissioner of Commercial Taxes,

(Karnataka), Bangalore.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

## ಅಧಿಸೂಚನೆ

**ಸಂಖ್ಯೆ: ಸಿಆಸುಇ 219 ಆಸೇಇ 2007, ಬೆಂಗಳೂರು, ದಿನಾಂಕ: 19ನೇ ಜುಲೈ 2007**

1999ನೇ ತಂಡದಲ್ಲಿ ಕರ್ನಾಟಕ ಆಡಳಿತ ಸೇವಾ ಸಮೂಹ–ಎ (ಕಿರಿಯ ಶ್ರೇಣಿ) ವೃಂದಕ್ಕೆ ಆಯ್ಕೆಗೊಂಡು ದಿನಾಂಕ: 11.07.2007 ರಂದು ಕೆ.ಎ.ಎಸ್. (ಕಿರಿಯ ಶ್ರೇಣಿ) ಪರೀಕ್ಷಾರ್ಥಿಯಾಗಿ ನೇಮಕಗೊಂಡಿರುವ ಶ್ರೀ ಸಂಗಪ್ಪ, ಇವರನ್ನು ಕ್ಷೇತ್ರ ತರಬೇತಿ ಪಡೆಯಲು ಮೈಸೂರು ಜಿಲ್ಲೆಗೆ ನಿಯೋಜಿಸಲಾಗಿದೆ.

ಶ್ರೀ ಸಂಗಪ್ಪ, ಇವರನ್ನು ಈ ಅಧಿಸೂಚನೆಗೆ ಲಗತ್ತಿಸಿರುವ ಅನುಬಂಧದಲ್ಲಿ ನಮೂದಿಸಿರುವ ದಿನಾಂಕ: 20.07.2007 ರಿಂದ 29.06.2008 ರವರೆಗೆ ತರಬೇತಿಗಾಗಿ ನಿಯೋಜಿಸಲಾಗಿದೆ. ಶ್ರೀ ಸಂಗಪ್ಪ ಇವರು ದಿನಾಂಕ: 29.7.2007 ರಂದು ಸಾಮಾನ್ಯ ಬುನಾದಿ ತರಬೇತಿಗೆ ಆಡಳಿತ ತರಬೇತಿ ಸಂಸ್ಥೆ, ಮೈಸೂರು, ಇಲ್ಲಿ ಹಾಜರಾಗತಕ್ಕದ್ದು ಹಾಗೂ ದಿನಾಂಕ: 10.09.2007 ರಂದು ಮೈಸೂರು ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಕ್ಷೇತ್ರ ತರಬೇತಿಗೆ ಹಾಜರಾಗತಕ್ಕದ್ದು.

ಪರೀಕ್ಷಾರ್ಥಿ ಅವಧಿಯಲ್ಲಿ ಪರೀಕ್ಷಾರ್ಥಿಯು ಅವರ ವೇತನ ಮತ್ತು ಭತ್ಯೆಗಳನ್ನು ಮಹಾಲೇಖಪಾಲರು ನೀಡುವ ವೇತನ ಪಟ್ಟಿಯ ಆಧಾರದ ಮೇಲೆ ಪಡೆಯುವುದು.

ಪರೀಕ್ಷಾರ್ಥಿಯು ಪಡೆದ ತರಬೇತಿಯ ವರದಿಯನ್ನು ಪ್ರತಿ ತಿಂಗಳ 10ನೇ ತಾರೀಖಿನೊಳಗೆ ಸರ್ಕಾರಕ್ಕೆ ಸಲ್ಲಿಸಬೇಕು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಚ್.ಆರ್.ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2).

## ಅನುಬಂಧ

**ಶ್ರೀ ಸಂಗಪ್ಪ 1999ನೇ ಸಾಲಿನ ಕರ್ನಾಟಕ ಆಡಳಿತ ಸೇವಾ ಕಿರಿಯ ಶ್ರೇಣಿ ಪರೀಕ್ಷಾರ್ಥಿ ಅಧಿಕಾರಿ ಇವರಿಗೆ ದಿನಾಂಕ: 20.07.2007 ರಿಂದ 29.06.2008 ರವರೆಗೆ ತರಬೇತಿ ಕಾರ್ಯಕ್ರಮದ ವಿವರ:–**

| **I. ಸಚಿವಾಲಯದಲ್ಲಿ ತರಬೇತಿ:** | | |
|---|---|---|
| ಕ್ರ.ಸಂ. | ತರಬೇತಿಗೆ ನಿಯೋಜಿಸಿರುವ ಕಛೇರಿ | ಅವಧಿ |
| 1 | ಕಂದಾಯ ಇಲಾಖೆ | 20.07.2007 ರಿಂದ 21.07.2007 |
| 2 | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ | 23.07.2007 ರಿಂದ 24.07.2007 |
| 3 | ಕೃಷಿ ಮತ್ತು ತೋಟಗಾರಿಕೆ ಇಲಾಖೆ | 25.07.2007 ರಿಂದ 26.07.2007 |
| 4 | ನಗರಾಭಿವೃದ್ಧಿ ಇಲಾಖೆ | 27.07.2007 ರಿಂದ 28.07.2007 |

| **II. ಸಾಮಾನ್ಯ ಬುನಾದಿ ತರಬೇತಿ (Common Foundation Course)** | | | |
|---|---|---|---|
| ಕ್ರ.ಸಂ. | ತರಬೇತಿಗೆ ನಿಯೋಜಿಸಿರುವ ಕಛೇರಿ | ಅವಧಿ | ದಿನಾಂಕ |
| 1 | ಆಡಳಿತ ತರಬೇತಿ ಸಂಸ್ಥೆ, ಲಲಿತಮಹಲ್ ರಸ್ತೆ, ಮೈಸೂರು. | 6 ವಾರ | 30.07.2007 ರಿಂದ 07.09.2007 |

| **III. FUNCTIONAL OR FIELD TRAINING: (17 WEEKS)** | | | |
|---|---|---|---|
| ಕ್ರ.ಸಂ. | ತರಬೇತಿಗೆ ನಿಯೋಜಿಸಿರುವ ಕಛೇರಿ | ಅವಧಿ | ದಿನಾಂಕ |
| 1 | ಜಿಲ್ಲಾಧಿಕಾರಿಗಳ ಕಛೇರಿ | 3 ವಾರ | 10.09.2007 ರಿಂದ 29.09.2007 ರವರೆಗೆ |
| 2 | ಗ್ರಾಮಲೆಕ್ಕಿಗ, ಪಂಚಾಯತ್ ಕಾರ್ಯದರ್ಶಿಯವರ ಕಛೇರಿ. | 2 ವಾರ | 01.10.2007 ರಿಂದ 12.10.2007 ರವರೆಗೆ |
| 3 | ಕಂದಾಯ ನಿರೀಕ್ಷಕರ ಕಛೇರಿ | 2 ವಾರ | 15.10.2007 ರಿಂದ 27.10.2007 ರವರೆಗೆ |
| 4 | ತಾಲ್ಲೂಕು ಕಛೇರಿ | 4 ವಾರ | 29.10.2007 ರಿಂದ 24.11.2007 ರವರೆಗೆ |
| 5 | ಉಪವಿಭಾಗಾಧಿಕಾರಿಗಳ ಕಛೇರಿ | 1 ವಾರ | 26.11.2007 ರಿಂದ 01.12.2007 ರವರೆಗೆ |
| 6 | ಜಿಲ್ಲಾ ಪೊಲೀಸ್ ಕಛೇರಿ | 1 ವಾರ | 03.12.2007 ರಿಂದ 07.12.2007 ರವರೆಗೆ |
| 7 | ಜುಡಿಷಿಯಲ್ ಕೋರ್ಟ್ಸ್ | 1 ವಾರ | 10.12.2007 ರಿಂದ 15.12.2007 ರವರೆಗೆ |

| | | | |
|---|---|---|---|
| 8 | ಇತರೆ ಜಿಲ್ಲಾ ಕಛೇರಿಗಳು<br>1 ಸಹಕಾರ ಇಲಾಖೆ<br>2. ವಾಣಿಜ್ಯ ತೆರಿಗೆ ಇಲಾಖೆ<br>3. ಖಜಾನೆ ಇಲಾಖೆ<br>4. ಉಪನೋಂದಣಾಧಿಕಾರಿ ಕಛೇರಿ<br>5. ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ | 1 ವಾರ | 17.12.2007 ರಿಂದ 22.12.2007 ರವರೆಗೆ |
| 9 | ಮಹಾನಗರ ಪಾಲಿಕೆ/ನಗರಸಭೆ ಕಛೇರಿ | 1 ವಾರ | 24.12.2007 ರಿಂದ 29.12.2007 ರವರೆಗೆ |
| 10 | ಪ್ರಾದೇಶಿಕ ಆಯುಕ್ತರ ಕಛೇರಿ | 1 ವಾರ | 31.12.2007 ರಿಂದ 05.01.2008 ರವರೆಗೆ |
| **IV. ZILLA PANCHAYATHS (9 WEEKS)** | | | |
| ಕ್ರ.ಸಂ. | ತರಬೇತಿಗೆ ನಿಯೋಜಿಸಿರುವ ಕಛೇರಿ | ಅವಧಿ | ದಿನಾಂಕ |
| 1 | ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಜಿಲ್ಲಾ ಪಂಚಾಯತ್ | 2 ವಾರ | 07.01.2008 ರಿಂದ 19.01.2008 ರವರೆಗೆ |
| 2 | ಉಪಕಾರ್ಯದರ್ಶಿ, (ಆಡಳಿತ ಮತ್ತು ಅಭಿವೃದ್ಧಿ) ಜಿಲ್ಲಾ ಪಂಚಾಯತ್ | 1 ವಾರ | 21.01.2008 ರಿಂದ 25.01.2008 ರವರೆಗೆ |
| 3 | ಮುಖ್ಯ ಯೋಜನಾಧಿಕಾರಿ, ಜಿಲ್ಲಾ ಪಂಚಾಯತ್ | 1 ವಾರ | 28.01.2008 ರಿಂದ 02.02.2008 ರವರೆಗೆ |
| 4 | ಮುಖ್ಯ ಲೆಕ್ಕಾಧಿಕಾರಿ, ಜಿಲ್ಲಾ ಪಂಚಾಯತ್ | 1 ವಾರ | 04.02.2008 ರಿಂದ 08.02.2008 ರವರೆಗೆ |
| 5 | ಜಿಲ್ಲಾ ಪಂಚಾಯತ್ ಅಧೀನ ಕಛೇರಿಗಳು:<br>1. ಕೃಷಿ<br>2. ಲೋಕೋಪಯೋಗಿ<br>3. ಅರಣ್ಯ<br>4. ತೋಟಗಾರಿಕೆ<br>5. ಪಶುಸಂಗೋಪನೆ & ಪಶುವೈದ್ಯ ಸೇವೆ<br>6. ಆರೋಗ್ಯ ಮತ್ತು ಕುಟುಂಬ ಕಲ್ಯಾಣ<br>7. ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ<br>8. ಶಿಕ್ಷಣ | 4 ವಾರ | 11.02.2008 ರಿಂದ 07.03.2008 ರವರೆಗೆ |
| **V. HOLDING INDEPENDENT CHARGE: (16 WEEKS)** | | | |
| ಕ್ರ.ಸಂ. | ತರಬೇತಿಗೆ ನಿಯೋಜಿಸಿರುವ ಕಛೇರಿ | ಅವಧಿ | ದಿನಾಂಕ |
| 1 | ತಹಶೀಲ್ದಾರ್ | 6 ವಾರ | 10.03.2008 ರಿಂದ 19.04.2008 ರವರೆಗೆ |
| 2 | ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್ | 6 ವಾರ | 21.04.2008 ರಿಂದ 01.06.2008 ರವರೆಗೆ |
| 3 | ಉಪವಿಭಾಗಾಧಿಕಾರಿ, ಕಂದಾಯ ಉಪವಿಭಾಗ (by temporary bifurcation) | 4 ವಾರ | 03.06.2008 ರಿಂದ 29.06.2008 ರವರೆಗೆ |

**ಎಚ್.ಆರ್.ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2).

ಪಿ.ಆರ್.1047

**ತೋಟಗಾರಿಕೆ ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿ ಕಾರ್ಯಾಲಯದ ಶಿಸ್ತು ಕ್ರಮ ನಡವಳಿಗಳು**

**ವಿಷಯ:** ಶ್ರೀ ಎಲ್. ಲಿಂಗರಾಜು ಪ್ರದಸ ರವರ ವಿರುದ್ಧದ ಶಿಸ್ತು ಕ್ರಮಗಳ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿ ಸಮ ಸಂಖ್ಯೆ: ಆದೇಶದ ದಿನಾಂಕ: 23.3.2002.
2) ಈ ಕಛೇರಿ ಸಮ ಸಂಖ್ಯೆ: ನೋಟೀಸಿನ ದಿನಾಂಕ: 30.07.2003.
3) ಈ ಕಛೇರಿ ಸಮ ಸಂಖ್ಯೆ ಆದೇಶದ ದಿನಾಂಕ: 03.09.2002.
4) ವಿಚಾರಣಾಧಿಕಾರಿಗಳ:ಮಂಡನಾಧಿಕಾರಿಗಳ ನೇಮಕಾತಿ ಆದೇಶದ ದಿನಾಂಕ: 15.9.2003.
5) ಈ ಕಛೇರಿ ಸಮ ಸಂಖ್ಯೆ ಆದೇಶದ ದಿನಾಂಕ: 03.07.2004.
6) ವಿಚಾರಣಾಧಿಕಾರಿಗಳ ವರದಿ ದಿನಾಂಕ: 21.08.2004.
7) ವಿಚಾರಣಾ ವರದಿ ಹಾಗೂ ಎರಡನೇ ನೋಟೀಸು ಜಾರಿ ಮಾಡಲಾದ ದಿನಾಂಕ: 01.09.2004.
8) ಸದರಿಯವರ ಅಂತಿಮ ಅಹವಾಲು ದಿನಾಂಕ: 27.11.2004.

ಪ್ರಸ್ತಾವನೆ:

ಶ್ರೀ ಎಲ್. ಲಿಂಗರಾಜು ಪ್ರದಸ (ನಿಲಂಬನೆ) ರವರು ಈ ಹಿಂದೆ ಪ್ರದಸ ಆಗಿ ತೋಟಗಾರಿಕೆ ಜಂಟಿ ನಿರ್ದೇಶಕರು, ಬೆಂಗಳೂರು ವಿಭಾಗ, ರವರ ಅಧೀನ ಕಾರ್ಯನಿರ್ವಹಿಸುತ್ತಿದ್ದಾಗ ದಿನಾಂಕ: 1.8.2001 ರಿಂದ ದಿನಾಂಕ: 7.8.2001ರ ವರೆಗೆ ಹಾಗೂ ದಿನಾಂಕ: 10.8.2001 ರಿಂದ 29.08.2001ರವರೆಗೆ ಅನಧಿಕೃತ ಗೈರುಹಾಜರಾಗುವ ಮೂಲಕ ಕಛೇರಿ ಕೆಲಸಗಳಿಗೆ ಅಡಚಣೆ ಉಂಟು ಮಾಡಿರುತ್ತಾರೆ. ನಂತರ ಇವರು ಪುನಃ ದಿನಾಂಕ: 7.9.01, 11.9.01, 15.9.01, ರಂದು ಅನಧಿಕೃತ ಗೈರು ಹಾಜರಾಗಿದ್ದು ಮೇಲಿನ ಎಲ್ಲಾ ಅನಧಿಕೃತ ಗೈರುಹಾಜರಾತಿಯ ಅವಧಿಯನ್ನು ಕೆಸಿಎಸ್‌ಆರ್ ನಿಯಮ 106(ಎ)ರ ಪ್ರಕಾರ ವೇತನ ರಹಿತ ರಜೆ ಎಂದು ಪರಿಗಣಿಸಿ ಆದೇಶ ಹೊರಡಿಸಲಾಗಿತ್ತು.

ಇವರನ್ನು ಪುನಃ ದಿನಾಂಕ: 11.10.01 ರಿಂದ ನಿರ್ದೇಶನಾಲಯದಲ್ಲಿ ಏನಿ–12ರಾಗಿ ನೇಮಿಸಲಾಗಿತ್ತು. ಸದರಿ ಈ ಹುದ್ದೆಗೆ ಹಾಜರಾದ 2 ದಿನಗಳಲ್ಲಿ ದಿನಾಂಕ: 15.11.01 ರಿಂದ ದಿ: 27.11.01 ರವರೆಗೆ 13 ದಿನಗಳು ಮತ್ತು ದಿ: 3.12.01 ರಿಂದ ದಿನಾಂಕ: 7.12.01 ರವರೆಗೆ ಒಟ್ಟು 5 ದಿನ ಅನಧಿಕೃತ ಗೈರು ಹಾಜರಾಗಿರುತ್ತಾರೆ. ಈ ಬಗ್ಗೆ ಸದರಿ ಇವರಿಗೆ ದಿನಾಂಕ: 13.12.01 ರಂದು ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿ ದಿನಾಂಕ: 14.12.01 ರಂದು ತಪ್ಪೊಪ್ಪಿಗೆ ಬರೆದು ಕೊಟ್ಟಿದ್ದು ಇನ್ನು ಮುಂದೆ ಪೂರ್ವಾನುಮತಿ ಪಡೆಯದೆ ಕಛೇರಿಗೆ ಗೈರು ಹಾಜರಾಗುವುದಿಲ್ಲ ಎಂದು ತಿಳಿಸಿ ಮನ್ನಿಸುವಂತೆ ಕೋರಿರುತ್ತಾರೆ. ಆದರೆ ಇವರು ಪುನಃ ದಿನಾಂಕ: 12.2.02 ಮತ್ತು ದಿನಾಂಕ: 13.2.02 ರಂದು ಮುಂಚಿತವಾಗಿ ರಜೆ ಮಂಜೂರಾತಿ ಪಡೆಯದೇ ತೆರಳಿದ್ದು ಹಾಗೂ ದಿನಾಂಕ: 2.3.02 ರಿಂದ ನಿರಂತರವಾಗಿ ಅನಧಿಕೃತ ಗೈರು ಹಾಜರಿಯಲ್ಲಿಯೇ ಇದ್ದುದರಿಂದ ಉಲ್ಲೇಖ (1) ರಂತೆ ಆದೇಶ ಹೊರಡಿಸಿ ಸದರಿಯವರನ್ನು ಇಲಾಖಾ ವಿಚಾರಣೆ ಕಾಯ್ದಿರಿಸಿ ಅಮಾನತ್ತಿನಲ್ಲಿರಿಸಲಾಗಿತ್ತು.

ಉಲ್ಲೇಖ (2) ರಂತೆ ಮೇಲಿನ ಆರೋಪದ ಬಗ್ಗೆ ಸದರಿಯವರಿಗೆ ಕೆಸಿಎಸ್ ಸಿಸಿಎ ನಿಯಮಾವಳಿ 1957ರ ನಿಯಮ (11) ರಡಿ ಆರೋಪ ಪಟ್ಟಿಯನ್ನು ಜಾರಿ ಮಾಡಲಾಗಿತ್ತು.

ಈ ಮಧ್ಯೆ ಸದರಿಯವರು ಕರ್ತವ್ಯಕ್ಕೆ ಪುನರ್ ನೇಮಕಾತಿ ಮಾಡುವಂತೆ ಕೋರಿ ಮನವಿ ಸಲ್ಲಿಸಿದ ಕಾರಣ ಉಲ್ಲೇಖ (3) ರಂತೆ ಇಲಾಖಾ ವಿಚಾರಣೆ ಕಾಯ್ದಿರಿಸಿ ತೋಟಗಾರಿಕೆ ಉಪ ನಿರ್ದೇಶಕರು (ಜಿಲ್ಲಾ ಪಂಚಾಯತ್) ಕೊಪ್ಪಳ ರವರ ಅಧೀನ ಖಾಲಿ ಇರುವ ಪ್ರದಸ ಹುದ್ದೆಗೆ ಪುನರ್ ನೇಮಕಾತಿ ಮಾಡಲಾಗಿತ್ತು.

ಸದರಿಯವರು ದಿನಾಂಕ: 7.12.02 ರಲ್ಲಿ ಪ್ರತಿ ರಕ್ಷಣಾ ಹೇಳಿಕೆ ಸಲ್ಲಿಸಿ ಅನಾರೋಗ್ಯದ ಕಾರಣ ಕರ್ತವ್ಯಕ್ಕೆ ಗೈರು ಹಾಜರಾಗಿರುವುದಾಗಿ ತಿಳಿಸಿರುತ್ತಾರೆ. ಆದರೆ ತಮ್ಮ ಹೇಳಿಕೆಯನ್ನು ಸಮರ್ಥಿಸಿಕೊಳ್ಳಲು ಯಾವುದೇ ದಾಖಲಾತಿಗಳನ್ನು ನೀಡದ ಕಾರಣ ಈ ಬಗ್ಗೆ ಸತ್ಯಾಸತ್ಯತೆಯನ್ನು ಅರಿಯಲು ಉಲ್ಲೇಖ (4) ರಂತೆ ವಿಚಾರಣಾಧಿಕಾರಿಗಳ:ಮಂಡನಾಧಿಕಾರಿಗಳ ನೇಮಕಾತಿ ಆದೇಶ ಹೊರಡಿಸಿ ತೋಟಗಾರಿಕೆ ಉಪ ನಿರ್ದೇಶಕರು (ಯೋಜನೆ) ಲಾಲ್‌ಬಾಗ್ ರವರನ್ನು ವಿಚಾರಣಾಧಿಕಾರಿಗಳನ್ನಾಗಿಯೂ ಹಾಗೂ ವ್ಯವಸ್ಥಾಪಕರು (ತಾಳೆಬೆಳೆ ಯೋಜನೆ) ಲಾಲ್‌ಬಾಗ್ ರವರನ್ನು ಮಂಡನಾಧಿಕಾರಿಗಳನ್ನಾಗಿಯೂ ನೇಮಿಸಲಾಗಿತ್ತು.

ಈ ಮಧ್ಯೆ ತೋಟಗಾರಿಕೆ ಉಪ ನಿರ್ದೇಶಕರು (ಜಿಲ್ಲಾ ಪಂಚಾಯತ್) ಕೊಪ್ಪಳ ರವರು ತಮ್ಮ ದಿನಾಂಕ: 21:22.1.04ರ ಪತ್ರದಲ್ಲಿ ಸದರಿಯವರು ಮತ್ತೊಮ್ಮೆ ಪದೇ ಪದೇ ಅನಧಿಕೃತ ಗೈರು ಹಾಜರಾಗುತ್ತಿರುವುದಾಗಿ ವರದಿ ಮಾಡಿದ ಕಾರಣ ಉಲ್ಲೇಖ (5) ರಂತೆ ಆದೇಶ ಹೊರಡಿಸಿ ಮತ್ತೊಮ್ಮೆ ಸದರಿಯವರನ್ನು ಅಮಾನತ್ತುಗೊಳಿಸಲಾಯಿತು.

ಉಲ್ಲೇಖ (6) ರಂತೆ ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿ ಸದರಿಯವರು ಆರೋಪಗಳನ್ನು ಒಪ್ಪಿಕೊಂಡಿರುವುದಾಗಿ ಲಿಖಿತ ಹೇಳಿಕೆಯನ್ನು ಬರೆದುಕೊಟ್ಟಿರುವುದಾಗಿ ತಿಳಿಸಿರುತ್ತಾರೆ. ಅದರಂತೆ ಉಲ್ಲೇಖ (7) ರಲ್ಲಿ ವಿಚಾರಣಾ ವರದಿಯನ್ನು ಎರಡನೇ ನೋಟೀಸಿನೊಂದಿಗೆ ಜಾರಿ ಮಾಡಲಾಗಿತ್ತು. ಉಲ್ಲೇಖ (8) ರಂತೆ ಸದರಿಯವರು ಅಂತಿಮ ಅಹವಾಲನ್ನು ಸಲ್ಲಿಸಿ ಅನಧಿಕೃತ ಗೈರು ಹಾಜರಾತಿಯ ಅವಧಿಯನ್ನು ವೇತನ ರಹಿತ ರಜೆ ಎಂದು ಪರಿಗಣಿಸಲು ಕೋರಿರುತ್ತಾರೆ.

ಮೇಲಿನ ಎಲ್ಲಾ ಅಂಶಗಳ ಹಿನ್ನಲೆಯಲ್ಲಿ ಸದರಿಯವರ ವಿರುದ್ಧದ ಆರೋಪಗಳನ್ನು, ವಿಚಾರಣಾ ವರದಿಯನ್ನು ಲಭ್ಯವಿರುವ ದಾಖಲಾತಿಗಳನ್ನು, ಇವರು ನೀಡಿರುವ ಹೇಳಿಕೆಗಳನ್ನು ಪರಿಶೀಲಿಸಲಾಗಿ ಇವರು ಪದೇ ಪದೇ ಸರ್ಕಾರಿ ಕೆಲಸಗಳಿಗೆ ಅನಧಿಕೃತ ಗೈರುಹಾಜರಾಗಿರುವುದು ಹಾಗೂ ಸರ್ಕಾರಿ ಕೆಲಸದಲ್ಲಿ ಇವರಿಗೆ ಆಸಕ್ತಿ ಇಲ್ಲದಿರುವುದು ನನಗೆ ಮನವರಿಕೆಯಾಗಿರುತ್ತದೆ. ಆದ್ದರಿಂದ ಇವರಿಗೆ ಕೆಳಕಂಡಂತೆ ಕಠಿಣ ದಂಡನೆಯನ್ನು ವಿಧಿಸುವುದು ಸೂಕ್ತವೆಂದು ತೀರ್ಮಾನಿಸಿ ಆದೇಶ ಹೊರಡಿಸಿರುತ್ತೇನೆ.

**ಆದೇಶ ಸಂಖ್ಯೆ: ತೋಇ:ಅ:ಸಿ:10–2:140:01–02, ದಿನಾಂಕ: 8ನೇ ಫೆಬ್ರವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ವಿಚಾರಣಗಳ ಹಿನ್ನಲೆಯಲ್ಲಿ ತೋಟಗಾರಿಕೆ ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿಯಾದ ನಾನು ಕೆಸಿಎಸ್ ಸಿಸಿಎ ನಿಯಮಾವಳಿ 1957ರನಿಯಮ 9(2) (ಸಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಇದೇ ನಿಯಮಾವಳಿಯ ನಿಯಮ 8(vi) ರಲ್ಲಿರುವಂತೆ ಶ್ರೀ ಲಿಂಗರಾಜು ಎಲ್. ಪ್ರದಸ (ನಿಲಂಬನೆ) ರವರನ್ನು ತಕ್ಷಣದಿಂದಲೇ ಜಾರಿಗೆ ಬರುವಂತೆ ಕೆ.ಸಿ.ಎಸ್.ಆರ್. ನಿಯಮ 95 (3)ರ ಪ್ರಕಾರ "ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿ" ಗೊಳಿಸುವ ದಂಡನೆ ವಿಧಿಸಿ ಆದೇಶ ಹೊರಡಿಸಿರುತ್ತೇನೆ. ಹಾಗೂ ಇವರ ಅಮಾನತ್ತಿನ ಅವಧಿಯನ್ನು ಅಮಾನತ್ತು ಎಂದು ಪರಿಗಣಿಸಿರುತ್ತೇನೆ.

ಪಿ.ಆರ್. 430 ತೋಟಗಾರಿಕೆ ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರ.

**ಜಿಲ್ಲಾಧಿಕಾರಿ ಹಾಗೂ ಜಿಲ್ಲಾ ದಂಡಾಧಿಕಾರಿಗಳ ಕಾರ್ಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ಪ್ರಕಟಣೆ ಸಂಖ್ಯೆ: ಎಂಎಜಿ(2)ಸಿಆರ್–51/2005–06, ದಿನಾಂಕ: 27ನೇ ಜುಲೈ 2007**

**ವಿಷಯ:** ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ಪಟ್ಟಣ ಪಂಚಾಯಿತಿ ವ್ಯಾಪ್ತಿಯಲ್ಲಿ ವಾಹನ ನಿಲುಗಡೆ ನಿಯಂತ್ರಣ, ಏಕಮುಖ ಸಂಚಾರ ಮಾಡಲು ಆದೇಶ ಮಾಡುವ ಕುರಿತು.

**ಉಲ್ಲೇಖ:** 1) ಪೊಲೀಸ್ ಸೂಪರಿಂಟೆಂಡೆಂಟ್, ಶಿವಮೊಗ್ಗ ಇವರ ಪತ್ರದ ಸಂಖ್ಯೆ: ಹೆಚ್‌ಸಿ.612.ಡಿಸಿಆರ್‌ಬಿ–26/2007–08, ದಿನಾಂಕ: 28.04.07 ಮತ್ತು 04.05.07.

2) ಉಪವಿಭಾಗಾಧಿಕಾರಿಗಳು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ಇವರ ಪತ್ರ ಸಂಖ್ಯೆ: ಎಂಎಜಿ.ಸಿಆರ್–26/2007–08, ದಿನಾಂಕ: 14.06.07.

ತೀರ್ಥಹಳ್ಳಿ ಪಟ್ಟಣ ಪಂಚಾಯತಿ ವ್ಯಾಪ್ತಿಯಲ್ಲಿ ಸಾರ್ವಜನಿಕ ಸುರಕ್ಷತೆ ಹಾಗೂ ಸುಗಮ ವಾಹನ ಸಂಚಾರ ವ್ಯವಸ್ಥೆ ಕಲ್ಪಿಸಲು ಈ ಕೆಳಕಂಡ ಪರ್ಯಾಯ ವ್ಯವಸ್ಥೆಗೆ ಅನುಮೋದನೆ ನೀಡುವಂತೆ ಪೊಲೀಸ್ ಸೂಪರಿಂಟೆಂಡೆಂಟ್, ಶಿವಮೊಗ್ಗ ಇವರು ಉಲ್ಲೇಖ–1ರ ಪತ್ರದಲ್ಲಿ ಕೋರಿರುತ್ತಾರೆ.

1. **ದ್ವಿಚಕ್ರ ವಾಹನಗಳ ನಿಲುಗಡೆ:**
   1) ಗಾಂಧಿ ಚೌಕದಿಂದ–ಕಾರ್ ಸ್ಟ್ರೀಟ್‌ವರೆಗೆ (ರಥಬೀದಿ) ಮಾರ್ಗದಲ್ಲಿ–ಭಾನುವಾರ, ಮಂಗಳವಾರ, ಗುರುವಾರ, ಶನಿವಾರಗಳಂದು ವಾಹನಗಳನ್ನು ರಸ್ತೆಯ ಎಡಭಾಗದಲ್ಲಿ (ಅಂದರೆ ತಾಲ್ಲೂಕು ಕಛೇರಿಯ ಕಡೆ) ಮತ್ತು ಸೋಮವಾರ, ಬುಧವಾರ, ಶುಕ್ರವಾರಗಳಂದು ರಸ್ತೆಯ ಬಲಭಾಗಕ್ಕೆ (ಅಂದರೆ ಹಳೆ ಪೊಲೀಸ್ ಠಾಣೆಯ ಕಡೆ) ನಿಲ್ಲಿಸುವುದು.
   2) ವಿನಾಯಕ ಚಿತ್ರಮಂದಿರ ರಸ್ತೆ, ಮಸ್ಜಿದ್ ರಸ್ತೆಯಲ್ಲಿ ಭಾನುವಾರ, ಮಂಗಳವಾರ, ಗುರುವಾರ, ಶನಿವಾರಗಳಂದು ವಾಹನಗಳನ್ನು ರಸ್ತೆಯ ಎಡಭಾಗದಲ್ಲಿ ನಿಲ್ಲಿಸುವುದು ಮತ್ತು ಸೋಮವಾರ, ಬುಧವಾರ, ಶುಕ್ರವಾರಗಳಂದು ರಸ್ತೆಯ ಬಲಭಾಗಕ್ಕೆ ನಿಲ್ಲಿಸುವುದು (ನಾಲ್ಕು ಚಕ್ರದ ವಾಹನಗಳಿಗೆ ನಿಲುಗಡೆಗೆ ಅವಕಾಶವಿಲ್ಲ)
   3) ಕುವೆಂಪು ವೃತ್ತದಿಂದ ಆಗುಂಬೆ ವೃತ್ತದವರೆಗಿನ ಮಾರ್ಗದಲ್ಲಿ ಭಾನುವಾರ, ಮಂಗಳವಾರ, ಗುರುವಾರ, ಶನಿವಾರಗಳಂದು (ತಾಲ್ಲೂಕು ಕಛೇರಿ ಭಾಗದ ಕಡೆಗೆ) ರಸ್ತೆಯ ಎಡಭಾಗದಲ್ಲಿ ಮತ್ತು ಸೋಮವಾರ, ಬುಧವಾರ, ಶುಕ್ರವಾರಗಳಂದು (ಎಸ್.ಬಿ.ಎಂ. ಬ್ಯಾಂಕ್ ಕಡೆಗೆ) ರಸ್ತೆಯ ಬಲಭಾಗದಲ್ಲಿ ವಾಹನಗಳನ್ನು ನಿಲ್ಲಿಸುವುದು.
   4) ಕುವೆಂಪು ವೃತ್ತದಿಂದ ಬಸ್ ನಿಲ್ದಾಣದವರೆಗಿನ ಮಾರ್ಗದಲ್ಲಿ ಆಸ್ಪತ್ರೆಯ ಕಾಂಪೌಂಡ್ ಮುಂಭಾಗದಲ್ಲಿ, ಅಂದರೆ ರಸ್ತೆಯ ಬಲಭಾಗದಲ್ಲಿ ಲಘು ಮತ್ತು ದ್ವಿಚಕ್ರ ವಾಹನಗಳನ್ನು ನಿಲ್ಲಿಸುವುದು.
2. **ಬಸ್ ನಿಲುಗಡೆ:**
   1) ಸಾಗರ ಕಡೆಯಿಂದ ಬರುವ ಬಸ್‌ಗಳನ್ನು ಎ.ಪಿ.ರಸ್ತೆಯಲ್ಲಿ ಮಸೀದಿ ಮುಂಭಾಗ ನಿಲ್ಲಿಸುವುದು.
   2) ಆಗುಂಬೆ ಕಡೆಯಿಂದ ಬರುವ ಬಸ್‌ಗಳು ಹಳೆಯ ಥಿಯೇಟರ್ ಹಿಂದಕ್ಕೆ ನಿಲ್ಲಿಸುವುದು ಹಾಗೂ ಆಗುಂಬೆ ಕಡೆಗೆ ಹೋಗುವ ಬಸ್ಸುಗಳು ಬೃಂದಾವನ (ವಿಶ್ವಾಸ್) ಹೋಟೆಲ್ ಎದುರುಗಡೆ ನಿಲ್ಲಿಸುವುದು.
   3) ಶಿವಮೊಗ್ಗ ಕಡೆಯಿಂದ ಬರುವ ಬಸ್ಸುಗಳನ್ನು ತಾಲ್ಲೂಕು ಪಂಚಾಯಿತಿ ಹತ್ತಿರ (ಕೋರಿಕೆ ಸ್ಟಾಪ್) ನಿಲ್ಲಿಸುವುದು ಮತ್ತು ಸಾಗರ ಕೋಣಂದೂರು, ಆಗುಂಬೆ ಕಡೆಯಿಂದ ಬರುವ ಬಸ್ಸುಗಳನ್ನು ಎಸ್.ಬಿ.ಎಂ. ಗಿಂತ ಹಿಂದೆ ನಿಲ್ಲಿಸುವುದು.
   4) ಕೊಪ್ಪ ಕಡೆಯಿಂದ ಬರುವ ಬಸ್‌ಗಳು ಬಂಟರ ಭವನದ ನಂತರದ ಎದುರು ಭಾಗದಲ್ಲಿ ನಿಲ್ಲಿಸುವುದು ಹಾಗೂ ಕೊಪ್ಪ ಕಡೆ ಹೋಗುವ ಬಸ್ಸುಗಳು ಹಾಲಿ ಇರುವ ಬಸ್ ನಿಲ್ದಾಣದಲ್ಲಿ ನಿಲ್ಲಿಸುವುದು.
3. **ಏಕಮುಖ ಸಂಚಾರ:**
   1) ಗಾಂಧಿ ಚೌಕದಿಂದ ರಥಬೀದಿ ಕಡೆಗೆ ವಾಹನಗಳು ಓಡಾಡಬಹುದು ಆದರೆ ರಥಬೀದಿಯಿಂದ ಆಜಾದ್ ರಸ್ತೆಗೆ ಬರುವ ವಾಹನಗಳು ಛತ್ರಕೇರಿ ಲಿಂಕ್ ರಸ್ತೆಯ ಮುಖಾಂತರ ಓಡಾಡಬಹುದು (ಛತ್ರಕೇರಿ ಲಿಂಕ್ ರಸ್ತೆಯಿಂದ ರಥಬೀದಿ ರಸ್ತೆಯಲ್ಲಿ ಬರಲು ಅವಕಾಶವಿರುವುದಿಲ್ಲ).
   2) ಚರ್ಚ್ ಸರ್ಕಲ್‌ನಿಂದ ಸೊಪ್ಪುಗುಡ್ಡೆಗೆ ಬರುವ ವಾಹನಗಳು ಮಸೀದಿ ರಸ್ತೆ ಮುಖಾಂತರ ಓಡಾಡುವುದು.
   3) ಸೊಪ್ಪುಗುಡ್ಡೆಯಿಂದ ಚರ್ಚ್ ಸರ್ಕಲ್ ಕಡೆಗೆ ಬರುವ ವಾಹನಗಳು ವಿನಾಯಕ ಟಾಕೀಸ್ ಎದುರು ಭಾಗದ ರಸ್ತೆ ಮೂಲಕ ಓಡಾಡುವುದು.
4. **ಇತರೆ:**
   1) ಗಾಂಧಿ ಸರ್ಕಲ್‌ನಲ್ಲಿ ಯಾವುದೇ ವಾಹನಗಳಿಗೆ ಪಾರ್ಕಿಂಗ್ ಇರುವುದಿಲ್ಲ.
   2) ನಾಲ್ಕು ಚಕ್ರದ ಟ್ಯಾಕ್ಸಿ ವಾಹನಗಳನ್ನು ಹೆಲಿಪ್ಯಾಡ್ ರಸ್ತೆಯಲ್ಲಿ ಮತ್ತು ಅರಣ್ಯ ಇಲಾಖೆಯ ಕಾಂಪೌಂಡ್‌ನಿಂದ ಜೂನಿಯರ್ ಕಾಲೇಜ್ ಗೇಟ್‌ವರೆಗೆ ಎಡಭಾಗದಲ್ಲಿ ನಿಲ್ಲಿಸುವುದು.
   3) ಮುಖ್ಯ ರಸ್ತೆಗಳಾದ ಆಜಾದ್ ರಸ್ತೆ, ಮಸೀದಿ ರಸ್ತೆ, ವಿನಾಯಕ ಚಿತ್ರಮಂದಿರದ ರಸ್ತೆ, ರಥಬೀದಿ, ಕೊಪ್ಪ ರಸ್ತೆಗಳನ್ನು ಲಾರಿಗಳ, ಲೋಡಿಂಗ್ ಮತ್ತು ಅನ್‌ಲೋಡಿಂಗ್ ಅನ್ನು ಪ್ರತಿದಿನ ಮಧ್ಯಾಹ್ನ 12 ಗಂಟೆಯಿಂದ 3 ಗಂಟೆಯವರೆಗೆ ನಿರ್ವಹಿಸುವುದು.
   4) ಕುವೆಂಪು ವೃತ್ತದಿಂದ ಟಿ.ಬಿ.ಸರ್ಕಲ್ ರಸ್ತೆಯ ಎಡಭಾಗದಲ್ಲಿ ಖಾಸಗಿ ವಾಹನ ನಿಲ್ಲಿಸುವುದು.

ಪ್ರಸ್ತಾವನೆ ಹಾಗೂ ಅದರೊಂದಿಗಿರುವ ನಕ್ಷೆಯನ್ನು ಪರಿಶೀಲಿಸಿದೆ ಹಾಗೂ ಉಲ್ಲೇಖ–2ರ ರೀತ್ಯ ಉಪವಿಭಾಗಾಧಿಕಾರಿಗಳು, ಶಿವಮೊಗ್ಗ ಉಪವಿಭಾಗ ಇವರಿಂದ ವರದಿ ಪಡೆಯಲಾಗಿದೆ. ಈ ಮೇರೆಗೆ ತೀರ್ಥಹಳ್ಳಿ ಪಟ್ಟಣ ಪಂಚಾಯಿತಿ ವ್ಯಾಪ್ತಿಯಲ್ಲಿ ವಾಹನ ಸಂಚಾರ ವ್ಯವಸ್ಥೆ ಸುಗಮಗೊಳಿಸುವ ನಿಟ್ಟಿನಲ್ಲಿ ಮೋಟಾರು ವಾಹನ ಕಾಯ್ದೆ, 1988ರ ಕಲಂ 115, 117 ಮತ್ತು ಕರ್ನಾಟಕ ಪೊಲೀಸ್ ಕಾಯ್ದೆ, 1963 ಕಲಂ 31(1)(ಬಿ)ರ ಅನ್ವಯ ಪರ್ಯಾಯ ವಾಹನ ಸಂಚಾರ ವ್ಯವಸ್ಥೆಯನ್ನು ಅನುಮೋದಿಸುವುದು ಅವಶ್ಯವೆಂದು ಕಂಡುಬಂದಿರುತ್ತದೆ.

ಈ ಪ್ರಸ್ತಾವನೆಯ ಬಗ್ಗೆ ಸಾರ್ವಜನಿಕರು ಮತ್ತು ಸಂಘ ಸಂಸ್ಥೆಗಳಿಂದ ಆಕ್ಷೇಪಣೆ/ಸಲಹೆಗಳನ್ನು ಆಹ್ವಾನಿಸಲಾಗಿದೆ. ಆಸಕ್ತರು ಈ ಪ್ರಕಟಣೆ ರಾಜ್ಯಪತ್ರದಲ್ಲಿ ಪ್ರಕಟಗೊಂಡ ದಿನಾಂಕದಿಂದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ/ಸಲಹೆಗಳನ್ನು ಈ ಕಛೇರಿಗೆ ಲಿಖಿತ ರೂಪದಲ್ಲಿ ಸಲ್ಲಿಸಲು ತಿಳಿಸಿದೆ. ನಂತರ ಬಂದ ಆಕ್ಷೇಪಣೆ/ಸಲಹೆಗಳನ್ನು ಪರಿಗಣಿಸಲಾಗುವುದಿಲ್ಲ.

**ಟಿ.ಕೆ. ಅನಿಲ್ ಕುಮಾರ್**

ಪಿ.ಆರ್.1048 ಜಿಲ್ಲಾ ದಂಡಾಧಿಕಾರಿ, ಶಿವಮೊಗ್ಗ ಜಿಲ್ಲೆ. ಶಿವಮೊಗ್ಗ.

**PROCEEDINGS OF THE DISTRICT & SESSIONS COURT, GULBARGA**
**(Competent Authority under Rule 4 of Notaries Rules, 1956).**

**Sub:** Appointment of Notary for Shorapur Taluka-reg.

**Ref:** 1) Government of Karnataka Letter No. LAW 158 LCL 2006, dated: 7.6.2007 permitting to this office to call for applications from the eligible Advocates for the post of Notary.
2) Dist. Court, Gulbarga Notification No.2/2007.
3) Office Note dated: 25.7.2007 and orders passed thereon

it is hereby brought to the notice of public that the following Advocates have submitted their memorial for appointment of Notary for Shorapur Taluka in Gulbarga District.

1) Sri Patil Goudan Gouda S/o Siddappa Gouda, Advocate, Shorapur.
2) Sri Patil Virupaxappa S/o Channappa Gouda, Advocate, Shorapur.
3) Sri Appasaheb S/o Mahantgouda Patil, Advocate, Shorapur.
4) Smt. Sharmila D/o Sadashiva, Advocate, Shorapur.
5) Sri Hayyalappa S/o Ningappa Balbatti, Advocate, Shorapur.
6) Sri Basawaj S/o Durgappa Ansur, Advocate, Shorapur.
7) Sri Devendra S/o Timmanna, Advocate, Shorapur.
8) Sri Uday Singh S/o Santram Singh, Advocate, Shorapur.
9) Sri Sugappa S/o Nagappa Wali, Advocate, Shorapur.
10) Sri Patil Nandangouda S/o Somareddeppagouda, Advocate, Shorapur.

Therefore persons having any objections for appointment of above Advocates as Notary for Shorapur Taluka may submit their objections to the undersigned within 15 days from the date of publication of this notice in the official Gazette.

**H.S. RAMANNA**

P.R.1049 Prl. Dist. & Sessions Judge, Gulbarga.

**ಮುಖ್ಯ ಆಡಳಿತಾಧಿಕಾರಿಗಳು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಕೋಲಾರ**
**ತ್ವರಿತಗತಿ ನ್ಯಾಯಾಲಯ–2 : ಕೋಲಾರ.**
**ಫೌಜುದಾರಿಕೆ ಸಂಕೀರ್ಣ ಅರ್ಜಿ ಸಂಖ್ಯೆ: 529:2005**

**ಫಿರ್ಯಾದುದಾರರು:** ಕೋಲಾರ (ನಗರ) ಠಾಣೆ.

ವಿರುದ್ಧ

**ಎದುರುದಾರರು:** ಇಲ್ಲಾ.

**ವಿಷಯ:** ಸಿ.ಆರ್.91:2001 (ಭಾ.ದ.ಸಂ. ಪ್ರಕರಣ 302 ಸಂಹಿತೆ) ಸಂಬಂಧಪಟ್ಟ ಕೆಎ 07 ಇ 9569 ನಂಬರಿನ ಟಿ.ವಿ.ಎಸ್. ಚಾಂಪ್ ಆರ್.ಸಿ. ಮಾಲೀಕರಾದ ಇಮ್ತಿಯಾಜ್ ಪತ್ತೆಯಾಗದಿರುವ ಬಗ್ಗೆ.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಕೋಲಾರ ನಗರ ಆರಕ್ಷಕರು (ಸಿ.ಆರ್.91:2001 ಎಸ್.ಸಿ.385:2001) (ಭಾ.ದ.ಸಂ.ಪ್ರಕರಣ 302) ಪ್ರಕರಣದ ತನಿಖೆ ಕಾಲದಲ್ಲಿ ಕೆಎ 07 ಇ 9569 ನಂಬರಿನ ಟಿ.ವಿ.ಎಸ್.ಚಾಂಪ್‌ನ್ನು ಪಂಚನಾಮೆಯಡಿ ವಶಪಡಿಸಿಕೊಂಡಿದ್ದು, ಸದರಿ ವಾಹನದ ಆರ್.ಸಿ. ಮಾಲೀಕರು ಯಾರೆಂಬುದು ಪತ್ತೆಯಾಗದೆ ಫೌಜುದಾರಿಕೆ ಸಂಕೀರ್ಣ ಅರ್ಜಿ ಸಂಖ್ಯೆ: 529:2005 ದಾಖಲಾಗಿದ್ದು, ಸದರಿ ಪ್ರಕರಣದಲ್ಲಿ

ಕೋಲಾರ ಸಾರಿಗೆ ಅಧಿಕಾರಿಗಳ ವರದಿಯಂತೆ ಮೇಲ್ಕಂಡ ದ್ವಿಚಕ್ರ ವಾಹನದ ಮಾಲೀಕರು ಶ್ರೀ ಎಂ.ನಂಜುಂಡಪ್ಪ ಬಿನ್ ಮುನಿವೆಂಕಟಪ್ಪ, ಅಬ್ಬಣಿ ಗ್ರಾಮ, ಹರಟಿ ಅಂಚೆ, ಕೋಲಾರ ತಾಲ್ಲೂಕು ಎಂಬುದಾಗಿ ತಿಳಿದುಬಂದಿದ್ದು, ಇವರಿಗೆ ನ್ಯಾಯಾಲಯದ ಮುಖಾಂತರ ತಿಳುವಳಿಕೆ ಹೊರಡಿಸಿದ್ದು, ಸರಿಯಷ್ಟೆ ನಂತರ ಈ ಮೇಲ್ಕಂಡ ನಂಜುಂಡಪ್ಪರವರು ದಿನಾಂಕ: 18.10.2005 ರಂದು ಈ ನ್ಯಾಯಾಲಯದ ಮುಂದೆ ಹಾಜರಾಗಿ ನಾನು ಈ ಮೇಲ್ಕಂಡ ದ್ವಿಚಕ್ರ ವಾಹನವನ್ನು 1998 ರಲ್ಲಿ ಇಮ್ತಿಯಾಜ್, ವೆಂಕಟೇಶ್ವರ ಚಿತ್ರಮಂದಿರದ ಹತ್ತಿರ ಕೋಲಾರ ನಗರ ಎಂಬುವವರಿಗೆ ಮಾರಿಬಿಟ್ಟಿದ್ದೇನೆ ಎಂದು ಹೇಳಿ ನ್ಯಾಯಾಲಯದಲ್ಲಿ ಒಂದು ಅರ್ಜಿಯನ್ನು ಸಲ್ಲಿಸಿರುತ್ತಾರೆ.

ದಿನಾಂಕ: 05.11.2005ನೇ ಇಸವಿಯಿಂದ ಈ ಮೇಲ್ಕಂಡ ಇಮ್ತಿಯಾಜ್ ಎಂಬುವವರಿಗೆ ನ್ಯಾಯಾಲಯದ ಮುಖಾಂತರ ತಿಳುವಳಿಕೆ ಹೊರಡಿಸಿದ್ದರೂ ಸಹ ಅವರು ವಿಳಾಸದಲ್ಲಿ ಇಲ್ಲವೆಂದು ಜಾರಿ ಆಗದೆ ಮರಳಿ ಮರಳಿ ಬಂದಿದ್ದು ಇದುವರೆವಿಗೂ ಅವರ ಹಾಲಿ ವಿಳಾಸ ಪತ್ತೆಯಾಗಿರುವುದಿಲ್ಲ.

ಆದುದರಿಂದ ಸದರಿ ದ್ವಿಚಕ್ರ ವಾಹನದ ಮಾಲೀಕರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಪ್ರಕಟಣೆಯ ಆರು ತಿಂಗಳ ಒಳಗಾಗಿ ಮೇಲ್ಕಂಡ ನ್ಯಾಯಾಲಯಕ್ಕೆ ಖುದ್ದಾಗಿ ಅಥವಾ ವಕೀಲರ ಮೂಲಕವಾಗಲೀ ಮುಂದಿನ ಕ್ರಮಕ್ಕಾಗಿ ಹಾಜರಾಗದ ಪಕ್ಷದಲ್ಲಿ ಸದರಿ ದ್ವಿಚಕ್ರ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದಾಗಿ ಈ ಮೂಲಕ ತಿಳಿಯಪಡಿಸಲಾಗಿದೆ.

ನ್ಯಾಯಾಲಯದ ಆದೇಶದ ಮೇರೆಗೆ,
**ಆರ್. ಚೌಡಪ್ಪ**
ಮುಖ್ಯ ಆಡಳಿತಾಧಿಕಾರಿಗಳು,
ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಕೋಲಾರ.

ಪಿ.ಆರ್.1053

**COMMERCIAL TAX DEPARTMENT**

**COMMERCIAL TAX OFFICER, VAT SUB OFFICE-373, MAHALE COMPLEX, N.H.17, HONAVAR**

**NOTIFICATION**

**No. VSO.373/2007-08, DATED: 25th JULY 2007**

In pursuance of the provision contained in sub Rule (2) of Rule 12 of the Central Sales Tax Act (Karnataka) 1956, it is hereby notified for general information that, the declaration in Form "C" shown below is declared to be obsolete and invalid.

| Sl. No. | Name of the Authority issuing Declaration Form | Name & Address of the dealer to whom declaration Forms are issued by the Dept. with TIN/CST No. | Name of the declaration Forms and number (including Code No) of the declaration Forms declared as obsolute & invalid | Date of issue to the Dealer | Whether lost/ Destroyed/ Stolen | Remarks |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | V.S.O. - 373, Honavar. | Sri. Venkatesh M. Kamat Venus Distributors, Sharavati Road, Honavar. TIN 29910365056. | "C" Form TCK-1441612 | 08.02.2007 | Lost in their custody | The lost "C" Forms declared obsolute & invalid |

**L.F. GONSALVIS**
COMMERCIAL TAX OFFICER,
VAT SUB OFFICE-373, HONAVAR.

P.R.1055

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಗಳು**

ವಿಷಯ: ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ನಲ್ಲಹಳ್ಳಿ ಗ್ರಾಮದ ಸರ್ವೆ ಸಂಖ್ಯೆ 283:5 ರಲ್ಲಿ 2.00 ಎಕರೆ ಪ್ರದೇಶಕ್ಕೆ ಮಲ್ಟಿ ಕಲ್ಲರ್ ಗ್ರಾನೈಟ್‌ಗಾಗಿ ಶ್ರೀಮತಿ ಇಂದಿರಮ್ಮ ಅವರಿಗೆ ಮಂಜೂರಾಗಿದ್ದ ಕಲ್ಲುಗಣಿ ಗುತ್ತಿಗೆ ಸಂಖ್ಯೆ 303ನ್ನು ಪುನರ್ ಸ್ಥಾಪಿಸುವ ಬಗ್ಗೆ.

ಉಲ್ಲೇಖ: 1) ಸರ್ಕಾರದ ಪತ್ರ ಸಂಖ್ಯೆ: ಸಿಐ 242 ಎಂಎಂಎನ್ 2004, ದಿನಾಂಕ: 29.07.2007.
2) ಸರ್ಕಾರದ ಪತ್ರ ಸಂಖ್ಯೆ: ಸಿಐ 121 ಎಂಎಂಎನ್ 2007, ದಿನಾಂಕ: 13.07.2007.

**ಪ್ರಸ್ತಾವನೆ:**

ಶ್ರೀಮತಿ ಇಂದಿರಮ್ಮ ಅವರಿಗೆ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ನಲ್ಲಹಳ್ಳಿ ಗ್ರಾಮದ ಸರ್ವೆ ಸಂಖ್ಯೆ: 283:5 ರಲ್ಲಿ 2.00 ಎಕರೆ ಪ್ರದೇಶಕ್ಕೆ ಮಲ್ಟಿ ಕಲರ್ ಗ್ರಾನೈಟ್‌ಗಾಗಿ ದಿನಾಂಕ: 24.01.2000 ರಿಂದ 10 ವರ್ಷಗಳ ಅವಧಿಗೆ ಕ್ಯೂಎಲ್ ಸಂಖ್ಯೆ: 303 ರಲ್ಲಿ ಕಲ್ಲುಗಣಿ ಗುತ್ತಿಗೆ ಪರವಾನಗಿಯನ್ನು ಮಂಜೂರು ಮಾಡಲಾಗಿತ್ತು. ಗುತ್ತಿಗೆದಾರರು ಸದರಿ ಕಲ್ಲುಗಣಿ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟು ಬಾಕಿ ರೂ.54251–00ನ್ನು ಪಾವತಿಸಿದ ಕಾರಣ ದಿನಾಂಕ: 21.02.2004ರ ಆದೇಶದಲ್ಲಿ ಕಲ್ಲುಗಣಿ ಗುತ್ತಿಗೆ ಸಂಖ್ಯೆ: 303ನ್ನು ರದ್ದುಪಡಿಸಲಾಗಿತ್ತು.

ಈ ಆದೇಶದ ವಿರುದ್ಧ ಗುತ್ತಿಗೆದಾರರು ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮಾವಳಿ 1994ರ ನಿಯಮ 53(1) ರಡಿಯಲ್ಲಿ ಸರ್ಕಾರಕ್ಕೆ ಪರಿಷ್ಕರಣ ಅರ್ಜಿಯನ್ನು ಸಲ್ಲಿಸಿದ್ದು, ಸರ್ಕಾರವು ಉಲ್ಲೇಖ–1ರ ಪತ್ರದಲ್ಲಿ ಪರಿಷ್ಕರಣ ಅರ್ಜಿಯನ್ನು ಸರ್ಕಾರಕ್ಕೆ ಬಾಕಿ ಇರುವ ಎಲ್ಲಾ ಮೊತ್ತವನ್ನು ಪಾವತಿಸುವ ಷರತ್ತಿಗೊಳಪಟ್ಟು ಅಂಗೀಕರಿಸಿದೆ ಹಾಗೂ ಅರ್ಜಿದಾರರ ಕಲ್ಲುಗಣಿ ಗುತ್ತಿಗೆ ಸಂಖ್ಯೆ 303ನ್ನು ರದ್ದುಪಡಿಸಲಾದ ನಿರ್ದೇಶಕರ ದಿನಾಂಕ: 21.02.2004ರ ಆದೇಶವನ್ನು ರದ್ದುಪಡಿಸಿರುತ್ತದೆ. ನಂತರ ಗುತ್ತಿಗೆದಾರರು ದಿನಾಂಕ: 21.04.2007 ರಂದು ರೂ.1,56,200 ಹಾಗೂ ದಿನಾಂಕ: 08.05.2007 ಬಾಕಿ ರೂ.1,36,000–00 ಗಳನ್ನು ಪಾವತಿಸಿರುತ್ತಾರೆ. ಆನಂತರ ಉಲ್ಲೇಖ–2ರ ಸರ್ಕಾರದ ಪತ್ರದಲ್ಲಿ ಅರ್ಜಿದಾರರು ಬಾಕಿ ಪಾವತಿಸಿರುವುದರಿಂದ ಗುತ್ತಿಗೆಯನ್ನು ಮರು ಸ್ಥಾಪಿಸಲು ನಿರ್ದೇಶಿಸಿರುತ್ತಾರೆ.

**ಆದೇಶ ಸಂಖ್ಯೆ: ಗಭೂಇ:ಡಿಸಿಬಿ:ಕಗಗು–303:2007–08/5241, ದಿನಾಂಕ: 1ನೇ ಆಗಸ್ಟ್ 2007**

ಗಣಿ ಮತ್ತು ಭೂ ವಿಜ್ಞಾನ ಇಲಾಖೆ ನಿರ್ದೇಶಕರಿಗೆ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಐ 242 ಎಂಎಂಎನ್ 2004, ದಿನಾಂಕ: 29.07.2005 ಮತ್ತು ಸಂಖ್ಯೆ: ಸಿಐ 121 ಎಂಎಂಎನ್ 2007, ದಿನಾಂಕ: 13.07.2007 ರಲ್ಲಿ ನಿರ್ದೇಶಿಸಿರುವಂತೆ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು ನಲ್ಲಹಳ್ಳಿ ಗ್ರಾಮದ ಸರ್ವೆ ಸಂಖ್ಯೆ:283:5 ರಲ್ಲಿ 2.00 ಎಕರೆಗೆ ಶ್ರೀಮತಿ ಇಂದಿರಮ್ಮ ಅವರಿಗೆ ಮಂಜೂರಾಗಿದ್ದ ಕಲ್ಲುಗಣಿ ಗುತ್ತಿಗೆ ಸಂಖ್ಯೆ: 303ರ ಗುತ್ತಿಗೆಯನ್ನು ರದ್ದುಗೊಳಿಸಿದ ದಿನಾಂಕ: 21.02.2004 ರಿಂದ ಗುತ್ತಿಗೆಯನ್ನು ಜಾರಿಯಾದಾಗ ವಿಧಿಸಲಾದ ಷರತ್ತುಗಳನ್ನೊಳಗೊಂಡಂತೆ ಪುನರ್ ಸ್ಥಾಪಿಸಲಾಗಿದೆ.

ನಿರ್ದೇಶಕರು,

ಪಿ.ಆರ್.1056 ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು.

**ಒಳಾಡಳಿತ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಒಇ 266 ಪೊಸಿಪ 2007, ಬೆಂಗಳೂರು, ದಿನಾಂಕ: 4ನೇ ಆಗಸ್ಟ್ 2007**

ಶ್ರೀ ಆರ್. ಕೃಷ್ಣಮೂರ್ತಿ, ಡಿವೈ.ಎಸ್.ಪಿ. (ಸಿವಿಲ್) (ಎಸ್‌ಸಿ) (ಪಿ.ಐ. ವೃಂದದ ಜೇಷ್ಠತಾ ಪಟ್ಟಿ ಕ್ರಮ ಸಂಖ್ಯೆ: 844) ಇವರಿಗೆ ದಿನಾಂಕ: 04.10.2005 ರಂದು ಪ್ರಕಟಿಸಿರುವ ಅಧಿಸೂಚನೆ ಸಂಖ್ಯೆ: ಒಇ 95 ಪೊಸಿಪ 2003ರ ಡಿವೈ.ಎಸ್.ಪಿ. ವೃಂದದ ಕರಡು ಜೇಷ್ಠತಾ ಪಟ್ಟಿಯಲ್ಲಿ ದಿನಾಂಕ: 21.07.2003 ಅನ್ನು ಅರ್ಹತಾ ದಿನಾಂಕವೆಂದು ಪರಿಗಣಿಸಿ ಕ್ರಮ ಸಂಖ್ಯೆ: 159 ರಲ್ಲಿ ಜೇಷ್ಠತೆಯನ್ನು ನಿಗದಿಪಡಿಸಿ ಪ್ರಕಟಿಸಲಾಗಿದೆ. ಶ್ರೀ ಆರ್.ಕೃಷ್ಣಮೂರ್ತಿ ಇವರ ವಿರುದ್ಧದ ಇಲಾಖಾ ವಿಚಾರಣೆಗಳಲ್ಲಿ ಒಂದರಲ್ಲಿ ದೋಷಮುಕ್ತಗೊಳಿಸಲಾಗಿದೆ ಹಾಗೂ ಎರಡನೇ ಇಲಾಖಾ ವಿಚಾರಣೆಯಲ್ಲಿ ವಾಗ್ದಂಡನೆ ವಿಧಿಸಲಾಗಿರುವುದರಿಂದ ಇವರ ಅರ್ಹತಾ ದಿನಾಂಕವನ್ನು ಪಿ.ಐ. ವೃಂದದ ಜೇಷ್ಠತೆಯಲ್ಲಿ ಪರಿಷ್ಕರಿಸಿ ಇವರಿಗಿಂತ ಕಿರಿಯರಾದ ಶ್ರೀ ಗಣೇಶಪ್ಪ ವಿ (ಎಸ್‌ಸಿ) ಪಿ.ಐ. ವೃಂದದ (ಕ್ರಮ ಸಂಖ್ಯೆ:869) ಇವರಿಗೆ ನೀಡಿರುವ ಅರ್ಹತಾ ದಿನಾಂಕ: 16.12.1999 ಪುನರ್ ನಿಗದಿಪಡಿಸಬೇಕಾಗಿದೆ.

ಶ್ರೀ ಆರ್. ಕೃಷ್ಣಮೂರ್ತಿ, ಡಿವೈ.ಎಸ್.ಪಿ, (ಸಿವಿಲ್) (ಎಸ್‌ಸಿ) ರವರಿಗೆ ಕೆ.ಎಸ್.ಸಿ.ಎಸ್. (ಆರ್.ಪಿ.ಪಿ.ಪಿ.) ನಿಯಮಗಳು, 1978 ನಿಯಮ 2(1)(ಎ) ರನ್ವಯ ಡಿವೈ.ಎಸ್.ಪಿ. ವೃಂದದ ಜೇಷ್ಠತಾ ಪಟ್ಟಿಯಲ್ಲಿನ ಅರ್ಹತಾ ದಿನಾಂಕವನ್ನು ಮಾರ್ಪಡಿಸಿ ದಿನಾಂಕ: 16.12.1999 ಎಂದು ಪುನರ್ ನಿಗದಿಪಡಿಸಿ ದಿನಾಂಕ: 04.10.2005 ರಲ್ಲಿ ಪ್ರಕಟಿಸಿರುವ ಡಿವೈ.ಎಸ್.ಪಿ. (ಸಿವಿಲ್) ವೃಂದದ ಕರಡು ಜೇಷ್ಠತಾ ಪಟ್ಟಿಯಲ್ಲಿ ಕ್ರಮ ಸಂಖ್ಯೆ: 159ರ ಬದಲಾಗಿ ಇವರ ಜೇಷ್ಠತೆಯನ್ನು ಕ್ರಮ ಸಂಖ್ಯೆ:27ಎ ಎಂದು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1100 **ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು).

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯ ಸಾಗರ

### ಅಧಿಸೂಚನೆ

**ಸಂಖ್ಯೆ: ಬಿ3:ಅಮೊ.ವಾಹನ.08/07–08, ದಿನಾಂಕ: 14ನೇ ಆಗಸ್ಟ್ 2007**

ಸಾಗರ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧದ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಸಾಗರ ವಿಭಾಗದ ಇಲಾಖಾ ಸಿಬ್ಬಂದಿ ವರ್ಗದವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡ ಸದರಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಪ್ರಕಾರ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ತಪಶೀಲು ಕೆಳಕಂಡಂತಿರುತ್ತದೆ.

| ಕ್ರ. ಸಂ. | ವಾಹನಗಳ ವಿವರ | ಅರಣ್ಯ ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1 | 2 | 3 | 4 | 5 |
| 1 | ಮೇಟಡೋರ್ ಕೆಎ–30–64 | ಶಿರಾಳಕೊಪ್ಪ ವಲಯದ ಅಮೊ ಸಂಖ್ಯೆ: 34/07–08, ದಿನಾಂಕ: 26.06.2007 | 616-Q-69038842 | 616-FD-708521 |
| 2 | ಮಾರುತಿ ವ್ಯಾನ್ ಕೆಎ–15–ಎಂ–1275 | ಅರಣ್ಯ ಸಂಚಾರಿ ಧಳ ಶಿಕಾರಿಪುರ ಅಮೊ ಸಂ: 39/07–08, ದಿನಾಂಕ: 09.08.2007 | Not Visible | ST-91-IN-164365 |
| 3 | ಕ್ಯಾಂಟರ್ ಕೆಎ–01–ಎ–4541 | ಅಂಬ್ಲಿಗೊಳ ವಲಯದ ಅಮೊ ಸಂ: 53/07–08, ದಿನಾಂಕ: 13.08.2007 | E-483-A102657 | 17EC10270434 |
| 4 | ಮಾರುತಿ ವ್ಯಾನ್ ಕೆಎ–37–ಎಂ–414 | ಅರಣ್ಯ ಸಂಚಾರಿ ಧಳ ಶಿಕಾರಿಪುರ ಅಮೊ ಸಂ: 40/07–08, ದಿನಾಂಕ: 13.08.2007. | Not Visible | ST-91-IN-697295 |

ಈ ಮೇಲ್ಕಂಡ ವಾಹನದ ಬಗ್ಗೆ ಯಾರು ವಾರಸುದಾರರು ಇಲ್ಲಿಯವರೆಗೆ ಹಾಜರಾಗದೇ ಇರುವುದರಿಂದ ಸದರಿ ವಾಹನಗಳ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕು ಬಾಧ್ಯತೆಗಳನ್ನು ಕೆಳ ಸಹಿ ಮಾಡಿರುವವರ ಸಮ್ಮುಖದಲ್ಲಿ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನಗಳನ್ನು ಶ್ರೀಗಂಧ ಮತ್ತು ಇತರೇ ಅರಣ್ಯ ಉತ್ಪನ್ನವನ್ನು ಕಳ್ಳಸಾಗಣೆ ಮಾಡಲು ಉಪಯೋಗಿಸಿದಕ್ಕಾಗಿ ವಾಹನಗಳನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳು ಅಧಿಕೃತ ಸಮಜಾಯಿಷಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿ ಮಾಡಿದವರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ ಈ ಮೇಲ್ಕಂಡ ವಾಹನಗಳ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

**ಜಿ. ಜಯರಾಮಯ್ಯ**

ಪಿ.ಆರ್.1102

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ

## ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ

### ಕಾರ್ಯನಿರ್ವಾಹಕ ಅಭಿಯಂತರರು (ವಿ), ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ., ಬಳ್ಳಾರಿ

**ಪ್ರಕಟಣೆ ಸಂಖ್ಯೆ: ಕಾನಿಅ(ವಿ)/ಬೃಕಾವಿ/ಬ/ಸಕಾನಿಅ(ಕ)/07–08/947–50, ದಿನಾಂಕ: 25ನೇ ಜೂನ್ 2007**

ವಿದ್ಯುತ್ ಪೂರೈಕೆ ಅಧಿನಿಯಮ 1948, ಸೆಕ್ಷನ್ 28, ಮತ್ತು 18(ಇ) ಅನುಸಾರವಾಗಿ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಒಂದು ಯೋಜನೆಯನ್ನು ರೂಪಿಸಿದೆ. ಈ ಯೋಜನೆಯನ್ನು ಅದೇ ಅಧಿನಿಯಮದ ಸೆಕ್ಷನ್ 29(2)ಕ್ಕೆ ಅನುಸಾರವಾಗಿ ಇಲ್ಲಿ ಪ್ರಕಟಿಸಲಾಗಿದೆ. ಈ ಪ್ರಕಟಣೆಯನ್ನು ಲೈಸೆನ್ಸ್ ಹೊಂದಿರುವವರು ಮತ್ತು ಇನ್ನಿತರ ಯಾವುದೇ ಸಂಬಂಧಿಸಿದ ವ್ಯಕ್ತಿಗಳ ಮಾಹಿತಿಗಾಗಿ ನೀಡಲಾಗಿದೆ. ಯೋಜನೆಯ ವಿವರಗಳು ಈ ಕೆಳಕಂಡಂತಿವೆ.

| ಕ್ರ. ಸಂ. | ಕೆಲಸದ ಹೆಸರು | ಉದ್ದೇಶ | ಹಾದು ಹೋಗುವ ಪ್ರದೇಶ | ಅಂದಾಜು ವೆಚ್ಚ (ರೂ.ಲಕ್ಷಗಳಲ್ಲಿ) |
|---|---|---|---|---|
| 1 | ಹಲಕುಂದಿ (ಮುಂಡರಗಿ ಕೈಗಾರಿಕಾ ವಲಯ): ಉದ್ದೇಶಿತ 110/11 ಕೆವಿ ವಿತರಣಾ ಕೇಂದ್ರಕ್ಕೆ ಹಾಲಿ ಇರುವ ಬಳ್ಳಾರಿ (ದಕ್ಷಿಣ) ಹಾಗೂ ಬಿ.ಎಸ್.ಎ.ಎಲ್. 110 ಕೆವಿ ಒಂಟಿ ಮಾರ್ಗದಿಂದ 110 ಕೆವಿ ಲಿಲೊ ಮಾರ್ಗದ ನಿರ್ಮಾಣ | ಹಲಕುಂದಿ ಹಾಗೂ ಸುತ್ತಮುತ್ತಲ ಗ್ರಾಮಗಳಿಗೆ ಮತ್ತು ಮುಂಡರಗಿ ಕೈಗಾರಿಕಾ ವಲಯಕ್ಕೆ ನಿರಂತರ ಹಾಗೂ ಉತ್ತಮ ಗುಣಮಟ್ಟದ ವಿದ್ಯುತ್ ಪೂರೈಕೆ. | ಬಳ್ಳಾರಿ ನಗರ ಹಾಗೂ ಮುಂಡರಗಿ ಗ್ರಾಮದ ಸರಹದ್ದು. | 608.16 |

| ಕ್ರ. ಸಂ. | ಕೆಲಸದ ಹೆಸರು | ಉದ್ದೇಶ | ಹಾದು ಹೋಗುವ ಪ್ರದೇಶ | ಅಂದಾಜು ವೆಚ್ಚ (ರೂ.ಲಕ್ಷಗಳಲ್ಲಿ) |
|---|---|---|---|---|
| 2 | ಸೋಮಸಮುದ್ರ (ಶ್ರೀಧರಗಡ್ಡ): ಉದ್ದೇಶಿತ 110/11 ಕೆವಿ ವಿತರಣಾ ಕೇಂದ್ರಕ್ಕೆ ಹಾಲಿ ಇರುವ ಮುನಿರಾಬಾದ್ – ಬಳ್ಳಾರಿ (ಉತ್ತರ) 110 ಕೆವಿ ಒಂಟಿ ಮಾರ್ಗದಿಂದ 110 ಕೆವಿ ಒಂಟಿ ಮಾರ್ಗದ ನಿರ್ಮಾಣ. | ಸೋಮಸಮುದ್ರ ಹಾಗೂ ಸುತ್ತಮುತ್ತಲ ಗ್ರಾಮಗಳಿಗೆ ನಿರಂತರ ಹಾಗೂ ಉತ್ತಮ ಗುಣಮಟ್ಟದ ವಿದ್ಯುತ್ ಪೂರೈಕೆ. | ಬಳ್ಳಾರಿ ನಗರ ಹಾಗೂ ಶ್ರೀಧರಗಡ್ಡ ಗ್ರಾಮದ ಸರಹದ್ದು. | 521.00 |
| 3 | ಪರಮನದೇವನಹಳ್ಳಿ (ಹಗರಿ): ಉದ್ದೇಶಿತ 110/11 ಕೆವಿ ವಿತರಣಾ ಕೇಂದ್ರಕ್ಕೆ ಹಾಲಿ ಇರುವ ಬಳ್ಳಾರಿ (ಉತ್ತರ) – ಪಾನ್ಯಮ್ ಸಿಮೆಂಟ್ 110 ಕೆವಿ ಒಂಟಿ ಮಾರ್ಗದಿಂದ 110 ಕೆವಿ ಒಂಟಿ ಮಾರ್ಗದ ನಿರ್ಮಾಣ. | ಪರಮದೇವನಹಳ್ಳಿ, ಹಾಗೂ ಸುತ್ತಮುತ್ತಲ ಗ್ರಾಮಗಳಿಗೆ ನಿರಂತರ ಹಾಗೂ ಉತ್ತಮ ಗುಣಮಟ್ಟದ ವಿದ್ಯುತ್ ಪೂರೈಕೆ. | ತೆಗ್ಗಿನಬೂದಿಹಾಳ್, ಚಾಗನೂರು, ಪರಮದೇವನಹಳ್ಳಿ, ಮೀನಹಳ್ಳಿ ಗ್ರಾಮಗಳ ಸರಹದ್ದು. | 496.26 |

ಮೇಲಿನ ಯೋಜನೆಗಳನ್ನು ಕಾರ್ಯರೂಪಕ್ಕೆ ತರಲು ಭಾರತೀಯ ಟೆಲಿಗ್ರಾಫ್ ಅಧಿನಿಯಮ 1985(13) ರಲ್ಲಿ ಉಪಲಭ್ಯವಾಗಿರುವ ಎಲ್ಲಾ ಅಧಿಕಾರವನ್ನು ಕವಿಪ್ರನಿನಿ ಹೊಂದಿರುವುದು. ಮತ್ತು ಅಧಿಕಾರವನ್ನು ಕವಿಪ್ರನಿನಿ ಚಲಾಯಿಸುವುದು. ಈ ಯೋಜನೆಗಳ ಬಗೆಗೆ ಏನಾದರೂ ಆಕ್ಷೇಪಣೆಗಳು ಇದ್ದಲ್ಲಿ ಅದನ್ನು ಈ ಪ್ರಕಟಣೆಯ ದಿನಾಂಕದಿಂದ ಎರಡು ತಿಂಗಳೊಳಗಾಗಿ ಕಾರ್ಯನಿರ್ವಾಹಕ ಅಭಿಯಂತರರು (ವಿ), ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ., ಬಳ್ಳಾರಿ ಇವರಿಗೆ ಲಿಖಿತ ರೂಪದಲ್ಲಿ ಸಲ್ಲಿಸಬೇಕಾಗಿ ವಿನಂತಿ ಹಾಗೂ ತದನಂತರ ಬರುವ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ ಎಂದು ಈ ಮೂಲಕ ತಿಳಿಯಪಡಿಸುತ್ತಿದ್ದೇವೆ.

ಕಾರ್ಯನಿರ್ವಾಹಕ ಅಭಿಯಂತರರು (ವಿ),
ಪಿ.ಡಿ. 90 ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ., ಬಳ್ಳಾರಿ.

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, 2ನೇ ವಲಯ, ಬೆಂಗಳೂರು ಹಾಗೂ ಬೆಂಗಳೂರು ರವರ ನ್ಯಾಯಾಲಯದಲ್ಲಿ**
**ದಾವಾ ಸಂಖ್ಯೆ: ಎಆರ್‌ಬಿ–2(45)/ಸಿಇಪಿ:1131–1133/87–88**

**ವಿಷಯ:** ದಿ ಗ್ರೈನ್ ಮರ್ಚೆಂಟ್ಸ್ ಬ್ಯಾಂಕ್, ಚಾಮರಾಜಪೇಟೆ, ಬೆಂಗಳೂರು ಇದರ ಅಮಲ್ಜಾರಿ ಸಂಖ್ಯೆ: ಎಆರ್‌ಬಿ–2(45)/ಸಿಇಪಿ:1131–1133/87–88ಕ್ಕೆ ಸಂಬಂಧಿಸಿದಂತೆ, ಸ್ಥಿರಾಸ್ತಿಯನ್ನು 1960ನೇ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38(7)ರ ಅನ್ವಯ ಮಾರಾಟ ಸ್ಥಿರೀಕರಣಗೊಳಿಸುವ ಬಗ್ಗೆ.

**ಉಲ್ಲೇಖ:** 1) ಜೆಆರ್‌ಬಿ:02:87–88, ಜೆಆರ್‌ಬಿ:03:87–88 ಜೆಆರ್‌ಬಿ:04:87–88, ದಿನಾಂಕ: 9.1.1988.
2) ಅಮಲ್ಜಾರಿ ಸಂಖ್ಯೆ: ಎಆರ್‌ಬಿ–2(45)/ಸಿಇಪಿ:1131–1133/87–88, ದಿನಾಂಕ: 9.2.1989.

ದಿ ಗ್ರೈನ್ ಮರ್ಚೆಂಟ್ಸ್ ಬ್ಯಾಂಕ್, ಚಾಮರಾಜಪೇಟೆ, ಬೆಂಗಳೂರು, ಇವರು ಹಣ ವಸೂಲಿಗಾಗಿ ಕಲಂ 70 ರಡಿಯಲ್ಲಿ ದಾವಾ ಸಂಖ್ಯೆಗಳು:ಜೆಆರ್‌ಬಿ/02/87–88, ಜೆಆರ್‌ಬಿ/03/87–88 ಮತ್ತು ಜೆಆರ್‌ಬಿ/04–87–88 ಗಳನ್ನು ಕ್ರಮವಾಗಿ ಶ್ರೀ ಆರ್. ಬಾಲಕೃಷ್ಣ, ಶ್ರೀ ಆರ್. ಜಯರಾಮ್ ಮತ್ತು ಶ್ರೀಮತಿ ಆರ್. ವೆಂಕಟಮ್ಮ ಇವರುಗಳ ವಿರುದ್ಧ ಕಲಂ 70 ರಡಿಯಲ್ಲಿ ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ವಿಭಾಗ, ಇವರ ನ್ಯಾಯಾಲಯದಲ್ಲಿ ಸಲ್ಲಿಸಲಾಗಿತ್ತು. ಸದರಿ ದಾವಾ ಪ್ರಕರಣಗಳನ್ನು ನ್ಯಾಯಾಲಯವು ಪರಿಶೀಲಿಸಿ, ದಾವಾದೇಶ ನೀಡಲಾಗಿದೆ. ದಾವಾದೇಶವಾದ ನಂತರವು ಕೂಡ ಮೇಲೆ ವಿವರಿಸಿದ ಸಾಲಗಾರರು ದಿ ಗ್ರೈನ್ ಮರ್ಚೆಂಟ್ಸ್ ಬ್ಯಾಂಕ್, ಚಾಮರಾಜಪೇಟೆ, ಬೆಂಗಳೂರು, ಇವರಿಗೆ ಬಡ್ಡಿ ಸಮೇತ ಸಾಲ ಮರುಪಾವತಿ ಮಾಡದೇ ಇದ್ದುದರಿಂದ ಮೇಲೆ ವಿವರಿಸಿದ ಬ್ಯಾಂಕ್ ಅಮಲ್ಜಾರಿ ಕ್ರಮವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಮತ್ತು ನಿಯಮ 1960 ರಡಿಯಲ್ಲಿ ಕೈಗೊಂಡಿದೆ. ಸದರಿ ಕ್ರಮದ ಹಿನ್ನಲೆಯಲ್ಲಿ ಅಮಲ್ಜಾರಿ ಸಂಖ್ಯೆ: ಎಆರ್‌ಬಿ–2(45)/ಸಿಇಪಿ:1131–1133/87–88 ರನ್ವಯ ಕ್ರಮ ಕೈಗೊಳ್ಳಲಾಗಿದೆ. ಅವಕಾಶ ನೀಡಲಾಗಿದ್ದರೂ ಕೂಡ ಸದರಿ ಕಟುಬಾಕಿದಾರರುಗಳು ಸಾಲ ಮರುಪಾವತಿ ಮಾಡಿರುವುದಿಲ್ಲ. ಈ ಹಿನ್ನಲೆಯಲ್ಲಿ ಸದರಿಯವರ ಆಸ್ತಿ ಸಂಖ್ಯೆ: 38 ಹಳೇ ನಂ.308, ಹಳೇ ತರಗುಪೇಟೆ, 10.3 X 49.6 ಅಡಿ ವಿಸ್ತೀರ್ಣವುಳ್ಳ ಆಸ್ತಿಯನ್ನು ದಿನಾಂಕ: 20.6.1988 ರ ಸೂಚನೆ ಹೊರಡಿಸಿ ಮಾರಾಟಕ್ಕೆ ಇಡಲಾಗಿದೆ. ಸದರಿ ಮಾರಾಟಕ್ಕೆ ಸಂಬಂಧಿಸಿದಂತೆ ಮೇಲೆ ವಿವರಿಸಿದ ಕಟುಬಾಕಿದಾರರಿಗೆ ನೋಟೀಸು ಜಾರಿ ಮಾಡಿ ಸ್ಥಿರಾಸ್ತಿಯನ್ನು ದಿನಾಂಕ: 15.7.1988 ರಂದು ಸಾರ್ವಜನಿಕ ಹರಾಜು ಮೂಲಕ ಮಾರಾಟ ಮಾಡಲು ಕನ್ನಡಪ್ರಭ ಬೆಂಗಳೂರು ದಿನಪತ್ರಿಕೆಯಲ್ಲಿ ಪ್ರಕಟಣೆ ನೀಡಲಾಗಿದೆ. ಸಂಬಂಧಿಸಿದ ಆಸ್ತಿ ಮಾರಾಟದ ಪೂರ್ವದಲ್ಲಿ ಆಸ್ತಿ ಮೌಲ್ಯಮಾಪನ ನೀಡಲಾಗಿದೆ. ದಿನಾಂಕ: 15.7.1988 ರಂದು ಬಹಿರಂಗ ಹರಾಜು ನಡೆಸಲಾಗಿದೆ. ಸದರಿ ಬಹಿರಂಗ ಹರಾಜಿನಲ್ಲಿ ಶ್ರೀ ಸಿ.ಹೆಚ್.ಶ್ರೀರಾಮಮೂರ್ತಿ ಇವರು ಅತಿ ಹೆಚ್ಚಿನ ಹರಾಜು ರೂ.4.11.000–00 ಲಕ್ಷಗಳಿಗೆ ಖರೀದಿಸಿದ್ದಾರೆ. ಸದರಿ ಬಹಿರಂಗದ ಹರಾಜಿನ ನಂತರವೂ ಕೂಡ ಮೇಲೆ ವಿವರಿಸಿದ ಕಟುಬಾಕಿದಾರರು ಸಾಲವನ್ನು ಬಡ್ಡಿಯೊಂದಿಗೆ ಈ ಮೇಲೆ ವಿವರಿಸಿದ ಬ್ಯಾಂಕಿಗೆ ಮರುಪಾವತಿ ಮಾಡಿರುವುದಿಲ್ಲ.

ಶ್ರೀಮತಿ ಆರ್.ವೆಂಕಟಮ್ಮ ಮತ್ತು ಶ್ರೀ ಆರ್.ಜಯರಾಮ್ ಇವರುಗಳು ಅಪೀಲು ಸಂಖ್ಯೆ: ಡಿಆರ್‌ಬಿ–2:ಮೇಲ್ಮನವಿ:41:2002–03ನ್ನು ಸಹಕಾರ ಸಂಘಗಳ ಉಪ ನಿಬಂಧಕರು–2, ಬೆಂಗಳೂರು ನಗರ ಜಿಲ್ಲೆ ಇವರ ನ್ಯಾಯಾಲಯದಲ್ಲಿ ದಾಖಲು ಮಾಡಿ ಅಮಲ್ಜಾರಿ ಕ್ರಮವಾಗಿ ಅಮಲ್ಜಾರಿ ಸಂಖ್ಯೆ: ಎಆರ್‌ಬಿ–2(45):ಸಿಇಪಿ:1131–1133/87–88 ನಿಯಮ 38(6)(ಎ) ರಂತೆ ಕ್ರಮ ಕೈಗೊಂಡಿರುವುದನ್ನು ಕಲಂ 106 ರಡಿಯಲ್ಲಿ ಪ್ರಶ್ನಿಸಲಾಗಿತ್ತು. ಮೇಲೆ ವಿವರಿಸಿದ ನ್ಯಾಯಾಲಯವು ಸದರಿ ಅಪೀಲಿನಲ್ಲಿ ದಿನಾಂಕ: 30.07.2007 ರಂದು ತೀರ್ಪು ನೀಡಿ, ಮೇಲೆ ವಿವರಿಸಿದ ಅಪೀಲು ವರದಿಯನ್ನು ತಿರಸ್ಕರಿಸಿ, ಈಗಾಗಲೇ ಹೊರಡಿಸಿದ ಅಮಲ್ಜಾರಿ ಆದೇಶದಲ್ಲಿ ವಿವರಿಸಿರುವ ಷೆಡ್ಯೂಲ್ ಆಸ್ತಿಗೆ ಸಂಬಂಧಿಸಿದಂತೆ ಸ್ಥಿರೀಕರಣ ಪ್ರಮಾಣ ಪತ್ರ (Sale Certificate) ನೀಡಲು ಈ ಪ್ರಾಧಿಕಾರವು ಆದೇಶಿಸಲಾಗಿದೆ. ಕಾರಣ ಈ ಕೆಳಕಂಡ ಆದೇಶ.

**ಆದೇಶ**

ಸದಾಶಿವಯ್ಯ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, 2ನೇ ವಲಯ, ಬೆಂಗಳೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಯಮಾವಳಿಗಳು 1960ರ ನಿಯಮ 38(6)(6) ರನ್ವಯ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಅಮಲ್ಜಾರಿ ಸಂಖ್ಯೆ: ಎಆರ್‌ಬಿ–2(45)/ಸಿಇಪಿ/1131–1133/87–88ಕ್ಕೆ ಸಂಬಂಧಿಸಿದ, ಶ್ರೀಮತಿ ಆರ್.ವೆಂಕಟಮ್ಮ, ಶ್ರೀ ಆರ್.ಬಾಲಕೃಷ್ಣ, ಮತ್ತು ಶ್ರೀ ಆರ್.ಜಯರಾಮ್, ಬೆಂಗಳೂರು ಇವರಿಗೆ ಸೇರಿದ ಸ್ಥಿರಾಸ್ತಿಯನ್ನು ದಿನಾಂಕ: 15.7.1988 ರಂದು ವಾದಿ ಬ್ಯಾಂಕಿನ ಮಾರಾಟಾಧಿಕಾರಿಗಳು ನಡೆಸಿದ ಬಹಿರಂಗ ಹರಾಜಿನಲ್ಲಿ ಶ್ರೀ ಸಿ.ಹೆಚ್. ಶ್ರೀರಾಮಮೂರ್ತಿ ಬೆಂಗಳೂರು ಇವರು ಅತಿ ಹೆಚ್ಚಿನ ಬಿಡ್ಡುದಾರರಾಗಿ ರೂ.4,11,000/– ಕ್ಕೆ ಖರೀದಿಸಿದ ಈ ಕೆಳಗೆ ವಿವರಿಸಿದ ಸ್ಥಿರಾಸ್ತಿಯ ಮಾರಾಟವನ್ನು ಖಾಯಂಗೊಳಿಸಿ ಸ್ಥಿರೀಕರಿಸಿರುತ್ತೇನೆ.

**ಸ್ಥಿರಾಸ್ತಿಯ ವಿವರ**

ಬೆಂಗಳೂರು ಮಹಾನಗರ ಪಾಲಿಕೆ ಹಳೇ ತರಗುಪೇಟೆಯಲ್ಲಿರುವ ಆಸ್ತಿ ಸಂಖ್ಯೆ: 38 (ಹಳೇ ನಂ.308) ಪೂರ್ವ–ಪಶ್ಚಿಮ 10.3 ಅಡಿ ಉತ್ತರ–ದಕ್ಷಿಣ 49.6 ಅಡಿ, ಪೂರ್ವಕ್ಕೆ ಶ್ರೀ ಬಿ.ಎಲ್.ಲಕ್ಷ್ಮೀನಾರಾಯಣಶೆಟ್ಟಿ ಇವರಿಗೆ ಸೇರಿದ ಅಂಗಡಿ, ಹಾಗೂ ಪಶ್ಚಿಮಕ್ಕೆ ಶ್ರೀ ಮಹಮ್ಮದ್ ಫೀರ್ ಇವರ ಅಂಗಡಿ, ಉತ್ತರಕ್ಕೆ ಹಳೇ ತರಗುಪೇಟೆ ಮುಖ್ಯರಸ್ತೆ, ದಕ್ಷಿಣಕ್ಕೆ ಖಾಸಗಿ ಆಸ್ತಿ ಮೇಲಿನ ಕಟುಬಾಕಿದಾರರಿಗೆ ಸೇರಿದ ಆಸ್ತಿ, ಹಾಲಿ ಶ್ರೀ ಸಿ.ಹೆಚ್. ಶ್ರೀರಾಮಮೂರ್ತಿ ಇವರ ವಶದಲ್ಲಿರುವ ಆಸ್ತಿ.

ಮಾರಾಟವಾದ ಮೊಬಲಗು ರೂ.4,11,000/– ಮಾರಾಟ ಮಾಡಿದ ದಿನಾಂಕ: 15.7.1988.

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ದಿನಾಂಕ: 31.07.2007 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
2ನೇ ವಲಯ, ಬೆಂಗಳೂರು.

ಪಿ.ಆರ್.1057

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪವಿಭಾಗ, ತಿಪಟೂರು ಇವರ ಕಾರ್ಯಾಲಯ**

**ಅಧಿಭಾರ ಅರ್ಜಿ ಸಂಖ್ಯೆ: 2:2006–2007**

| ಅರ್ಜಿದಾರರು: | ಎದುರು ಅರ್ಜಿದಾರರು: |
|---|---|
| ವ್ಯವಸ್ಥಾಪಕರು,<br>ಟೌನ್ ಸಹಕಾರ ಸಂಘ (ನಿ), ತುರುವೇಕೆರೆ | ಶ್ರೀ ಲಕ್ಷ್ಮೀನಾರಾಯಣ,<br>ಮಾಜಿ ಪ್ರಭಾರ ವ್ಯವಸ್ಥಾಪಕರು,<br>ಟೌನ್ ಸಹಕಾರ ಸಂಘ (ನಿ), ತುರುವೇಕೆರೆ |

**ಕರ್ನಾಟಕ ರಾಜ್ಯ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 103ರ ಮೇರೆಗೆ ಹೊರಡಿಸಿದ ತೀರ್ಪು ಮುನ್ನ ಜಪ್ತಿ ಆಜ್ಞೆ:**

ಟೌನ್ ಸಹಕಾರ ಸಂಘ (ನಿ) ತುರುವೇಕೆರೆ ಇದರ ಮಾಜಿ ಪ್ರಭಾರ ವ್ಯವಸ್ಥಾಪಕರಾದ ಶ್ರೀ ಲಕ್ಷ್ಮೀನಾರಾಯಣ ಇವರು ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ನಿಯಮ ಬಾಹಿರವಾಗಿ ಮುಂದಿನ ದಿನಾಂಕಗಳಂದು ನಮೂದಿಸಿದ ಚೆಕ್‌ಗಳನ್ನು ಶ್ರೀ ಬಿ. ಮಂಜುನಾಥರವರಿಂದ ಸಂಗ್ರಹಣೆಗಾಗಿ ಪಡೆದಿರುವುದಾಗಿ ತಿಳಿಸಿ ಚೆಕ್‌ಗಳನ್ನು ನಮೂದು ಮಾಡಿರುವ ದಿನಾಂಕಗಳಿಗಿಂತ 2–3 ತಿಂಗಳು ಮುಂಚಿತವಾಗಿ ಮಂಜುನಾಥರವರ ಹೆಸರಿನಲ್ಲಿ ಚೆಕ್‌ಗಳು ಇಲ್ಲದೆ ಶ್ರೀ ಪಾದ ಎಂಬುವವರ ಹೆಸರಿನಲ್ಲಿರುವ ಚೆಕ್‌ಗಳನ್ನು ಸಂಗ್ರಹಣೆಗಾಗಿ ಪಡೆದಿರುವುದಾಗಿ ತಿಳಿಸಿ ಮಂಜುನಾಥರವರಿಗೆ ಹಣ ಪಾವತಿಸಿರುವುದಾಗಿ ನಗದು ಪುಸ್ತಕದಲ್ಲಿ ಖರ್ಚು ಹಾಕಲಾಗಿದೆ. ಆದರೆ ಚೆಕ್‌ಗಳನ್ನು ನಗದೀಕರಿಸಲು ಕಳುಹಿಸದೆ ಸಂಘದಲ್ಲಿರುವ ನಗದು ಹಣವನ್ನು ಖರ್ಚು ಹಾಕಿರುವುದು ಹಾಗೂ ಚೆಕ್‌ಗಳನ್ನು ನಿಗದಿತ ಸಮಯದಲ್ಲಿ ನಗದೀಕರಿಸಲು ಕಳುಹಿಸದೆ ಸುಮಾರು 5–6 ತಿಂಗಳು ತಡವಾಗಿ ಕಳುಹಿಸಿ ಚೆಕ್‌ಗಳ ಖಾತೆಯಲ್ಲಿ ಹಣವಿಲ್ಲದೆ ವಾಪಸ್ಸು ಬಂದಿದ್ದು ಈ ನಗದಾಗದೆ ಬಂದ 12 ಚೆಕ್‌ಗಳ ಪೈಕಿ 3 ಚೆಕ್‌ಗಳಿಗೆ ಸಿವಿಲ್ ನ್ಯಾಯಾಲಯದಲ್ಲಿ ದಾವೆ ಹೂಡಿ ಉಳಿಕೆ ಚೆಕ್‌ಗಳ ಮೇಲೆ ದಾವ ಹೂಡದೆ ಸಂಘಕ್ಕೆ ರೂ.406150–00 ಗಳನ್ನು ಸಂಘಕ್ಕೆ ನಷ್ಟ ಉಂಟು ಮಾಡಿರುವುದನ್ನು ವಸೂಲಿಗೆ ಸಂಘದ 2003–2004ನೇ ಸಾಲಿನ ಲೆಕ್ಕ ಪರಿಶೋಧನಾ ವರದಿಯಲ್ಲಿ ಇಟ್ಟಿರುವುದರಿಂದ ಸದರಿ ಹಣದ ವಸೂಲಾತಿಗಾಗಿ ಅರ್ಜಿದಾರರು ಸಹಕಾರ ಸಂಘಗಳ ಕಾಯಿದೆ ಕಲಂ 69 ರಡಿಯಲ್ಲಿ ಅಧಿಭಾರ ಅರ್ಜಿ ದಾಖಲು ಮಾಡಿ ವಸೂಲಾತಿ ಆದೇಶ ಕೋರಿರುತ್ತಾರೆ. ಆದ್ದರಿಂದ ಪ್ರಕರಣವನ್ನು ಕಡತದ ಮೇಲೆ ತೆಗೆದುಕೊಂಡು ವಿಚಾರಣೆಯಲ್ಲಿರುತ್ತದೆ.

ವಸೂಲಾತಿ ಮೊತ್ತಕ್ಕೆ ತಕ್ಕ ಮೌಲ್ಯದ ಸ್ಥಿರಾಸ್ತಿಯನ್ನು ತೀರ್ಪು ಮುನ್ನ ನ್ಯಾಯಾಲಯದ ವ್ಯಾಪ್ತಿಗೆ ಒಳಪಡಿಸುವಂತೆ ಅರ್ಜಿದಾರರು ಮನವಿ ಮಾಡಿದ್ದರ ಮೇರೆಗೆ ಎದುರು ಅರ್ಜಿದಾರರ ಅಧಿಸೂಚನೆಯಲ್ಲಿ ಸೂಚಿಸಿರುವ ಸ್ಥಿರಾಸ್ತಿಯನ್ನು ತೀರ್ಪು ಮುನ್ನ ಜಪ್ತಿ ಆಜ್ಞೆಯನ್ನು ಷರತ್ತು ಪೂರ್ವಿಕವಾಗಿ ಈ ಕಛೇರಿಯಿಂದ ಇದೇ ಸಮಸಂಖ್ಯೆ ದಿನಾಂಕ: 7.5.2007 ರಂದು ನೀಡಲಾಗಿತ್ತು. ಸದರಿ ಆದೇಶದಲ್ಲಿ ಸೂಚಿಸಿದ ಷರತ್ತಿನ ಪ್ರಕಾರ ನ್ಯಾಯಾಲಯವು ಸರಿ ಎಂದು ಭಾವಿಸುವ ನಗದು ಭದ್ರತೆಯನ್ನು ಎದುರು ಅರ್ಜಿದಾರರು ಪೂರೈಸಲು ವಿಫಲರಾಗಿದ್ದರಿಂದ ಷರತ್ತು ಸಹಿತ ತೀರ್ಪು ಮುನ್ನ ಜಪ್ತಿ ಆಜ್ಞೆಯನ್ನು ಸ್ಥಿರೀಕರಿಸುವುದು ಅಗತ್ಯವಾಗಿರುವುದನ್ನು ಮನಗಂಡು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಸನಿ-34:ಡಿಡಿಎಸ್:ಕಲಂ 103:14:2007-2008, ದಿನಾಂಕ: 12ನೇ ಜುಲೈ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪವಿಭಾಗ, ತಿಪಟೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 103 ರನ್ವಯ ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ:2001, ದಿನಾಂಕ: 21.11.2001ರ ಪ್ರಕಾರ ದತ್ತವಾಗಿರುವ ಅಧಿಕಾರ ಉಪಯೋಗಿಸಿ ಅಧಿಸೂಚನೆಯಲ್ಲಿ ಸೂಚಿಸಿರುವ ಎದುರು ಅರ್ಜಿದಾರರ ಸ್ಥಿರಾಸ್ತಿಯನ್ನು ಕಲಂ 69ರ ಅಧಿಭಾರ ಅರ್ಜಿಯ ತೀರ್ಪಿನ ಮುನ್ನ ದಿನಾಂಕ: 7.5.2007ರ ಷರತ್ತು ಸಹಿತ ಜಪ್ತಿ ಆದೇಶವನ್ನು ಈ ಮೂಲಕ ಸ್ಥಿರೀಕರಿಸಲಾಗಿದೆ. ಈ ಕೆಳಕಂಡ ಸ್ಥಿರಾಸ್ತಿಯನ್ನು ಪಡೆಯುವ ಅಥವಾ ಖರೀದಿಸುವ ದಾನ ಪಡೆಯುವ ಅಥವಾ ಇನ್ನಾವುದೇ ರೀತಿಯಲ್ಲಿ ಹೊಂದುವ ವ್ಯಕ್ತಿ ಅಥವಾ ಸಂಸ್ಥೆಗಳು ಸಹ ಒಳಪಡುವುದೆಂದು ಆದೇಶಿಸಿದೆ. ಒಂದು ವೇಳೆ ಈ ಜಪ್ತಿ ಆಜ್ಞೆಯನ್ನು ಉಲ್ಲಂಘಿಸಿ ಸ್ಥಿರಾಸ್ತಿಯನ್ನು ಪಡೆಯುವ ಖರೀದಿಸುವ ದಾನ ಪಡೆಯುವ ಮತ್ತು ಇನ್ನಾವುದೇ ರೀತಿ ವ್ಯಕ್ತಿ ಅಥವಾ ಸಂಸ್ಥೆಗಳು ಹೊಂದಿದರೆ ಸಿಂಧುವಾಗುವುದಿಲ್ಲವೆಂದು ಸಾರ್ವಜನಿಕರಲ್ಲಿ ತಿಳಿಯಪಡಿಸಿದೆ.

ಜಪ್ತಿ ಆಜ್ಞೆಗೆ ಒಳಗಾದ ಸ್ಥಿರಾಸ್ತಿ ವಿವರ:

| ಕ್ರ. ಸಂ. | ಹಕ್ಕುದಾರರ ಹೆಸರು | ಸ್ಥಿರಾಸ್ತಿ ಇರುವ ಸ್ಥಳ | ಹೋಬಳಿ ತಾಲ್ಲೂಕು | ಅಸೆಸ್‌ಮೆಂಟ್ ನಂ. | ಆಸ್ತಿಯ ನಂ. | ವಿಸ್ತೀರ್ಣ | ತರಹೆ |
|---|---|---|---|---|---|---|---|
| 1) | ಲಕ್ಷ್ಮೀನಾರಾಯಣ ಬಿನ್ ಟಿ.ಎಂ.ಬ್ಯಾಟಪ್ಪ | ತರುವೇಕೆರೆ ಟೌನ್ | ತುರುವೇಕೆರೆ ತಾಲ್ಲೂಕು | 860 | 706:1 | $17^1/_2$ x 45 | ಆರ್‌ಸಿಸಿ ಬಿಲ್ಡಿಂಗ್ |

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 12.7.2007 ರಂದು ನೀಡಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ತಿಪಟೂರು ಉಪವಿಭಾಗ, ತಿಪಟೂರು.

ಪಿ.ಆರ್. 1059

**ನೋಂದಣಿ ಪ್ರಾಧಿಕಾರ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿ, ಬಳ್ಳಾರಿ ಇವರ ನಡವಳಿಕೆಗಳು**

**ಉಪಸ್ಥಿತರು:** ಶ್ರೀ ಕೆ. ಪಂಪಾಪತಿ,
ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಬಳ್ಳಾರಿ

**ವಿಷಯ:** ವಾಹನ ಸಂಖ್ಯೆ: ಕೆಎ-02:ಎಂ-993 ಎಲ್ಎಂವಿ ಮಹೀಂದ್ರ ಜೀಪ್ ನೋಂದಣಿ ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** 1) ವಾಹನ ಮಾಲೀಕರ ಅರ್ಜಿ ದಿನಾಂಕ: 06.07.2007.
2) ವಾಹನ ನಿರೀಕ್ಷಕರ ವರದಿ ದಿನಾಂಕ: 10.7.2007.

**ಪ್ರಸ್ತಾವನೆ:**

ಮೋಟಾರು ವಾಹನ ಸಂಖ್ಯೆ: ಕೆಎ-02:ಎಂ-993 ಎಲ್ಎಂವಿ ಮಹೀಂದ್ರ ಜೀಪ್ ವಾಹನದ ಮಾಲೀಕರು ವಾಹನದ ತೆರಿಗೆಯನ್ನು ಅವಧಿ 30.11.1999 ವರೆಗೆ ಪಾವತಿಸಿ, ವಾಹನವು ಅನುಪಯುಕ್ತದಲ್ಲಿದೆ ಹಾಗೂ ರಿಪೇರಿಯಾಗದ ಸ್ಥಿತಿಯಲ್ಲಿದೆ ಎಂಬ ಕಾರಣ ನೀಡಿ ನೋಂದಣಿ ರದ್ದುಪಡಿಸಲು ವಿನಂತಿಸಿಕೊಂಡಿದ್ದಾರೆ. ಅದಕ್ಕೆ ಪೂರಕವಾಗಿ ಈ ಕಛೇರಿಯ ವಾಹನ ನಿರೀಕ್ಷಕರು ತಮ್ಮ ವರದಿ ದಿನಾಂಕ: 10.7.2007 ರಲ್ಲಿ ನೋಂದಣಿ ರದ್ದುಪಡಿಸಲು ಶಿಫಾರಸ್ಸು ಮಾಡಿದ್ದಾರೆ. ಈ ಮೇಲಿನ ಅಂಶಗಳನ್ನು ಪರಿಗಣಿಸಿ, ಸದರಿ ವಾಹನದ ಮೇಲೆ ತೆರಿಗೆ ಬಾಕಿ, ಲೆಕ್ಕ ಪತ್ರ ತನಿಖಾ ಆಕ್ಷೇಪಣೆ ಅಥವಾ ಡಿ.ಎಸ್.ಎ. ಪ್ರಕರಣಗಳು ಏನಾದರೂ ಬಾಕಿ ಇರುವುದು ಕಂಡು ಬಂದಲ್ಲಿ ಸದರಿ ವಾಹನದ ಮಾಲೀಕರೆ ಪಾವತಿಸಬೇಕೆಂಬ ನಿಬಂಧನೆಯೊಂದಿಗೆ ದಿನಾಂಕ: 23.7.2007 ರಿಂದ ಅನ್ವಯವಾಗುವಂತೆ ನೋಂದಣಿಯನ್ನು ರದ್ದುಪಡಿಸಲು ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಆದೇಶ ಸಂಖ್ಯೆ: ಪ್ರಾಸಾಅ:ಬಳ್ಳಾರಿ:ನೋಂದಣಿ:ಕೆಎ-02:ಎಂ-993:07-08, ದಿನಾಂಕ: 23ನೇ ಜುಲೈ 2007**

ಮೇಲ್ಕಂಡ ವಿಷಯವನ್ನು ಪರಿಗಣಿಸಿ ಮೋಟಾರು ವಾಹನ ಕಾಯ್ದೆ 1988 ಕಲಂ 55ರ ಅಡಿಯಲ್ಲಿ ದತ್ತವಾದ ಅಧಿಕಾರದ ಮೇರೆಗೆ ನೋಂದಣಿ ಅಧಿಕಾರಿ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿ, ಬಳ್ಳಾರಿ ಆದ ನಾನು ವಾಹನ ಸಂಖ್ಯೆ: ಕೆಎ-02:ಎಂ-993 ಎಲ್ಎಂವಿ ಜೀಪ್, ವಾಹನದ ನೋಂದಣಿಯನ್ನು ದಿನಾಂಕ: 23.7.2007 ರಿಂದ ಅನ್ವಯವಾಗುವಂತೆ ಸದರಿ ವಾಹನದ ನೋಂದಣಿಯನ್ನು ವಾಹನದ ಮೇಲೆ ಸರ್ಕಾರಕ್ಕೆ ಬರಬೇಕಾದ ಬಾಕಿ ಏನಾದರೂ ಇದ್ದರೆ ಮಾಲೀಕರೇ ಪೂರ್ಣ ಮಾಡಬೇಕೆಂಬ ನಿಬಂಧನೆಯೊಂದಿಗೆ ರದ್ದುಪಡಿಸಲಾಗಿದೆ.

ವಾಹನದ ವಿವರಗಳು

| | | |
|---|---|---|
| 1) | ನೋಂದಣಿ ಸಂಖ್ಯೆ | ಕೆಎ–02:ಎಂ–993. |
| 2) | ವಾಹನದ ವರ್ಗ | ಎಲ್ಎಂವಿ ಮಹೀಂದ್ರ ಜೀಪ್. |
| 3) | ತಯಾರಕರ ಹೆಸರು | ಮಹೀಂದ್ರ |
| 4) | ಅಡಿಗಟ್ಟು ಸಂಖ್ಯೆ | ಎಂಎಂ 540 ಡಿಪಿಜಡ್‌ಡಿಎನ್ 23565. |
| 5) | ಯಂತ್ರದ ಸಂಖ್ಯೆ | ಡಿಎನ್–23565. |
| 6) | ಮಾಲೀಕರ ಹೆಸರು–ವಿಳಾಸ | ದಿ ಎಕ್ಸಿಕ್ಯೂಟಿವ್ ಇಂಜಿನಿಯರ್ (ಇಎಲ್ಇಸಿ) ಕೆ.ಇ.ಬಿ., ಮೇಜರ್ ವರ್ಕ್ ಡಿವಿಜನ್, ಬಳ್ಳಾರಿ. |

ನೋಂದಣಿ ಪ್ರಾಧಿಕಾರಿ ಹಾಗೂ ಪ್ರಾದೇಶಿಕ ಸಾರಿಗೆ
ಪಿ.ಆರ್.1058 ಅಧಿಕಾರಿ, ಬಳ್ಳಾರಿ.

**ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಅರಣ್ಯ ಸಂಚಾರಿ ದಳ, ಹಾಸನರವರ ನ್ಯಾಯಾಲಯ.**

**ಮುಟ್ಟುಗೋಲು ಆದೇಶ**

**ನಂ: ಹಾಸನ.ಅಸಂದಳ.71ಎ.ಅಮೊ:51/2003–04, ದಿನಾಂಕ: 18ನೇ ಜುಲೈ 2007**

**ಉಪಸ್ಥಿತರು:** ಸಿ.ಝಡ್. ಸೈಯದ್ ಗಫಾರ್.
ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಅರಣ್ಯ ಸಂಚಾರಿ ದಳ, ಹಾಸನ.

**ಆರೋಪಿಗಳು:** –

**ಪಿರ್ಯಾಧಿದಾರರು:** ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಹಾಸನ.

**ವಾಹನದ ಮಾಲೀಕರು:** ಶ್ರೀ ಹೆಚ್.ಎಂ. ದಿಲೀಪ್‌ಕುಮಾರ್ ಬಿನ್ ಮಂಜೇಗೌಡ, ಹಿರಿಯೂರು ಗ್ರಾಮ, ಹೊಳಲಹಳ್ಳಿ ಅಂಚೆ, ಹೆತ್ತೂರು ಹೋಬಳಿ, ಸಕಲೇಶಪುರ.

**ಕರ್ನಾಟಕ ಅರಣ್ಯ ಕಾಯಿದೆ 1963ರ – 33, 62, 71ಎ ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ನಿಯಮ 25, 43, 144ರ ಪ್ರಕಾರ ಅಪರಾಧ**

ಪ್ರಸ್ತಾವನೆ:

ದಿನಾಂಕ: 4.11.2003 ರಂದು ಈ ವಿಭಾಗದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು, ಮತ್ತು ಸಿಬ್ಬಂದಿ ವರ್ಗದವರು ದೂರವಾಣಿ ಸಂದೇಶದ ಮೇರೆಗೆ ರಾತ್ರಿ 9.00 ಗಂಟೆ ಸಮಯದಲ್ಲಿ ಸಕಲೇಶಪುರ–ಹೆತ್ತೂರು ಪಿ.ಡಬ್ಲ್ಯೂಡಿ. ರಸ್ತೆಯ ಬನ್ನಹಳ್ಳಿ ಗ್ರಾಮದ ಹತ್ತಿರ ಗಸ್ತು ಪಹರೆ ಕಾಯುತ್ತಿರುವಾಗ ಹೆತ್ತೂರು ಕಡೆಯಿಂದ ಬಂದ ವಾಹನವನ್ನು ಪರಿಶೀಲಿಸುವ ಸಲುವಾಗಿ ನಿಲ್ಲಿಸಲು ಸೂಚನೆ ನೀಡಿದಾಗ, ಸ್ವಲ್ಪ ದೂರ ಹೋಗಿ ನಿಲ್ಲಿಸಿ ಅದರಲ್ಲಿದ್ದ ವ್ಯಕ್ತಿಗಳು ಓಡಿ ಹೋಗಿದ್ದು, ಸದರಿ ವಾಹನದ ಹತ್ತಿರ ಹೋಗಿ ನೋಡಲಾಗಿ ಅದು ಆಟೋ ರಿಕ್ಷಾ ವಾಹನವಾಗಿದ್ದು, ನಂ. ಸಿಟಿಎಕ್ಸ್ 485 ಆಗಿದ್ದು, ಇಂಜಿನ್ ನಂ.178–ಎಲ್ಐ–077801, ಮಲ್ಲೇಶ್ವರ ನಾಮಫಲಕ ಹೊಂದಿದ್ದು, ಸದರಿ ವಾಹನದ ಒಳಗೆ 8 ಚೀಲಗಳಿದ್ದು, ಅದರಲ್ಲಿ ಆಗ ತಾನೆ ಕೆತ್ತಿ ತುಂಬಿದಂತಿದ್ದ, ಯಲಗ ಮತ್ತು ಕುಳಿರು ಮಾವು ಚಕ್ಕೆ ತುಂಬಿದ್ದು, ಅವುಗಳ ಮೇಲೆ ಯಾವುದೇ ಇಲಾಖಾ ಛಾಪ ಗುರುತು ಕಂಡು ಬರದ ಕಾರಣ, ಸದರಿ ಆಟೋ ಮತ್ತು ಅದರಲ್ಲಿದ್ದು 8 ಚೀಲ: 200 ಕೆ.ಜಿ. ಚಕ್ಕೆಯನ್ನು ಸರ್ಕಾರದ ಪರ ಅಮಾನತ್ತು ಪಡಿಸಿ, ಮಹಜರ್ ಕ್ರಮ ಜರುಗಿಸಿ ಅರಣ್ಯ ಮೊಕದ್ದಮೆ ನಂ.51/2003–04, ದಿನಾಂಕ: 4.11.2003 ನ್ನು ದಾಖಲಿಸಿ, **ಕರ್ನಾಟಕ ಅರಣ್ಯ ಕಾಯಿದೆ 1963ರ –33, 62, 71ಎ ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ನಿಯಮ 25, 43, 144ರ ಪ್ರಕಾರ** ಕಾನೂನು ಕ್ರಮ ಜರುಗಿಸಲು ಪ್ರಥಮ ವರ್ತಮಾನದ ವರದಿ, ಸೀಜರ್ ವರದಿ ಮತ್ತು ಮಹಜರ್‌ನೊಂದಿಗೆ ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಹಾಸನ ಇವರ ಮುಂದೆ ಹಾಜರು ಪಡಿಸಿರುತ್ತಾರೆ.

ಈ ಮೊಕದ್ದಮೆಗೆ ಸಂಬಂಧಿಸಿದಂತೆ, ಸದರಿ ವಾಹನದ ಮಾಲೀಕರಾದ ಶ್ರೀ ಹೆಚ್.ಎಂ.ದಿಲೀಪ್ ಕುಮಾರ್, ಹಿರಿಯೂರು, ಸಕಲೇಶಪುರ ತಾ: ಇವರು ದಿನಾಂಕ: 28.11.2003 ರಂದು ತಮ್ಮ ವಕೀಲರ ಮೂಲಕ ಅರ್ಜಿ ಸಲ್ಲಿಸಿ, ತಾವು ಸದರಿ ಆಟೋ ನಂ: ಸಿಟಿಎಕ್ಸ್:485ರ ವಾಹನದ ಮಾಲೀಕರಾಗಿದ್ದು, ಸದರಿ ವಾಹನವನ್ನು ಬಿಡುಗಡೆ ಮಾಡಿಕೊಡುವಂತೆ ಕೋರಿದ್ದರು. ನಂತರ ಸದರಿ ವಾಹನದ ಮಾಲೀಕರಿಗೆ ನ್ಯಾಯಾಲಯದ 71–ಬಿ ನೋಟೀಸನ್ನು ನೋಂದಾಯಿತ ಅಂಚೆ ಮೂಲಕ ಕಳುಹಿಸಿದ್ದು, ವಿಳಾಸದಾರರು ಇರುವುದಿಲ್ಲವೆಂದು ವಾಪಸ್ಸು ಬಂದಿರುತ್ತದೆ. ನಂತರ ಸದರಿ ಅರ್ಜಿದಾರರು ವಾಹನವನ್ನು ಮಧ್ಯಂತರ ವಶಕ್ಕೆ ಪಡೆದುಕೊಳ್ಳುವ ಕುರಿತು ಯಾವುದೇ ಕ್ರಮ ಕೈಗೊಂಡಿರುವುದಿಲ್ಲ. ಮುಂದುವರಿದು, ಈ ಪ್ರಕರಣದ ಬಗ್ಗೆ ನ್ಯಾಯಾಲಯದ ದಿನಾಂಕ: 24.9.2004, 29.10.2004, 22.1.2005, 30.11.2005, 14,12.2005, 20.9.2006, ರಂದು ಹಾಜರಾಗಲು ನೋಟೀಸು ನೀಡಲಾಗಿ ಅವರಾಗಲೀ, ಅವರ ವಕೀಲರಾಗಲೀ ಹಾಜರಾಗಿರುವುದಿಲ್ಲ. ಹಾಗೂ ದಿನಾಂಕ: 5.12.2006 ರಂದು ದಿನಪತ್ರಿಕೆಯಲ್ಲಿ ಸದರಿ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಪ್ರಕಟಣೆ

ಹೊರಡಿಸಿದಾಗ್ಯೂ, ಇದೂವರೆವಿಗೂ ಯಾರೂ ಕ್ಲೈಮ್ಸ್ ಹಾಜರಾಗಿರುವುದಿಲ್ಲ. ಇದರಿಂದ ಈ ಪ್ರಕರಣ ಕುರಿತು ಪ್ರತಿ ಪಕ್ಷದವರಿಗೆ ಯಾವುದೇ ಆಸಕ್ತಿ ಇಲ್ಲದಿರುವುದು ಮೇಲ್ನೋಟಕ್ಕೆ ಕಂಡು ಬರುತ್ತದೆ.

ಆದ್ದರಿಂದ ಈ ಪ್ರಕರಣದಲ್ಲಿ ವಾಹನದ ಹಾಗೂ ಅದರಲ್ಲಿ ತುಂಬಿದ್ದ ಅರಣ್ಯ ಉತ್ಪನ್ನ ಯಲಗ ಮತ್ತು ಕುಳಿರು ಮಾವು ಚಕ್ಕೆ 8 ಚೀಲ: 200 ಕೆ.ಜಿ. ಬಗ್ಗೆ ಏಕ ಪಕ್ಷೀಯವಾಗಿ ಇತ್ಯರ್ಥ ಪಡಿಸಲು ತೀರ್ಮಾನಿಸಲಾಯಿತು.

ಈ ಕೇಸಿನಲ್ಲಿಯ ಪ್ರಥಮ ವರ್ತಮಾನದ ವರದಿ, ಪಂಚನಾಮೆ ಮತ್ತು ಪ್ರಸ್ತುತ ಕೇಸಿನಲ್ಲಿ ಹಾಜರುಪಡಿಸಿದ ದಾಖಲೆಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಲಾಗಿ, ಈಕೇಸಿನಲ್ಲಿ ವಾಹನದ ಮಾಲೀಕರಿಗೆ ಈ ಘಟನೆಯ ಬಗ್ಗೆ ಸಂಪೂರ್ಣ ತಿಳುವಳಿಕೆ ಇತ್ತು. ಮತ್ತು ಸದರಿಯವರು ಬುದ್ಧಿಪೂರ್ವಕವಾಗಿಯೇ ತಮ್ಮ ವಾಹನವನ್ನು ಅರಣ್ಯ ಇಲಾಖೆಗೆ ಸೇರಿದ ಮಾಲನ್ನು ಕಳ್ಳತನದಿಂದ ಸಾಗಿಸುವ ಕುರಿತು ಆರೋಪಿತರಿಗೆ ಹಸ್ತಾಂತರಿಸಿದ್ದಾಗಿ ಕಂಡು ಬರುತ್ತದೆ. ಅಲ್ಲದೇ ಈ ಕಾರಣಕ್ಕೆ ವ್ಯತಿರಿಕ್ತವಾದ ಬೇರೆ ಕಾರಣಗಳು ಈ ಕೇಸಿನಲ್ಲಿ ಇರುವುದಿಲ್ಲ. ಆದುದರಿಂದ ಈ ಕೇಸಿನ ಸಂಗತಿ ಹಾಗೂ ಸಂದರ್ಭಗಳಡಿಯಲ್ಲಿ ಕೆಳಗಿನಂತೆ ಸದರಿ ವಾಹನವನ್ನು ಮುಟ್ಟುಗೋಲು ಹಾಕಲು ಆದೇಶ ಹೊರಡಿಸಿದೆ.

**ಆದೇಶ**

ಮೇಲೆ ವಿವರಿಸಿದ ಅಂಶಗಳನ್ನು ಕಡತದೊಂದಿಗೆ ಪೂರ್ತಿಯಾಗಿ ಪರಿಶೀಲಿಸಿ ಕರ್ನಾಟಕ ಫಾರೆಸ್ಟ್ ಆಕ್ಟ್ 71–ಎ(ಬಿ) ರನ್ವಯ ಪ್ರಕರಣದಲ್ಲಿ ಅಮಾನತ್ತು ಪಡಿಸಿದ ವಾಹನ ಆಟೋ ನಂ. ಸಿಟಿಎಕ್ಸ್–485ರ ಮಾಲೀಕರು ತಮ್ಮ ವಾಹನದಲ್ಲಿ ತಮ್ಮ ಬುದ್ಧಿ ಪೂರ್ವಕವಾಗಿ 8 ಚೀಲ=200 ಕೆ.ಜಿ. ಯಲಗ ಮತ್ತು ಕುಳಿರು ಮಾವು ಚಕ್ಕೆಯನ್ನು ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿದ್ದು ರುಜುಮಾತು ಆಗಿದ್ದು, ಶ್ರೀ ಸಿ.ಝಡ್.ಸೈಯದ್ ಗಫಾರ್, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಹಾಸನ ಆದ ನಾನು ಈ ಮೂಲಕ ಅರಣ್ಯ ಸಂಚಾರಿ ದಳ, ಹಾಸನದ ಅಮೊ: 51/2003–04 ದಿನಾಂಕ: 4.11.2003 ರಲ್ಲಿ ಅಮಾನತ್ತು ಪಡಿಸಿದ ಈ ಕೆಳಕಾಣಿಸಿದ ವಾಹನ ಆಟೋ ಸಿಟಿಎಕ್ಸ್–485 ಮತ್ತು 8 ಚೀಲ: 200 ಕೆ.ಜಿ. ಯಲಗ ಮತ್ತು ಕುಳಿರು ಮಾವು ಚಕ್ಕೆಯನ್ನು ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

**ಮುಟ್ಟುಗೋಲು ಹಾಕಿದ ವಾಹನದ ವಿವರ:**

ಆಟೋ ನಂ: ಸಿಟಿಎಕ್ಸ್–485– "ಮಲ್ಲೇಶ್ವರ ನಾಮಫಲಕ"

ಚಾಸೀಸ್ ನಂ: 077801–175–ಎಲ್ಐ

ಇಂಜಿನ್ ನಂ: 178–ಎಲ್ಐ–077801

ಈ ಆದೇಶವನ್ನು ಹೊರಡಿಸಿದ 30 (ಮೂವತ್ತು) ದಿನಗಳೊಳಗಾಗಿ ಯಾವುದೇ ಮೇಲ್ಮನವಿಯನ್ನು ಸಂಬಂಧಿಸಿದವರು ಸಲ್ಲಿಸದೇ ಇದ್ದ ಪಕ್ಷದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಈ ಆದೇಶವನ್ನು ಇಂದು ದಿನಾಂಕ: 18.7.2007 ರಂದು ತೆರೆದ ನ್ಯಾಯಾಲಯದಲ್ಲಿ ಹೇಳಿ, ಬೆರಳಚ್ಚು ಮಾಡಿಸಿ ಸರಿಪಡಿಸಿ ಹೊರಡಿಸಲಾಗಿದೆ.

**ಸಿ.ಝಡ್. ಸೈಯದ್ ಗಫಾರ್**

ಪಿ.ಆರ್.1064

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಹಾಸನ.

**ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಹಾಸನರವರ ನ್ಯಾಯಾಲಯ.**

**ಮುಟ್ಟುಗೋಲು ಆದೇಶ**

**ನಂ: ಹಾಸನ.ಅಸಂದಳ.71ಎ.ಅಮೊ:16/2006–07, ದಿನಾಂಕ: 18ನೇ ಜುಲೈ 2007**

**ಉಪಸ್ಥಿತರು:** ಸಿ.ಝಡ್. ಸೈಯದ್ ಗಫಾರ್.
ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಅರಣ್ಯ ಸಂಚಾರಿ ದಳ, ಹಾಸನ.

**ಆರೋಪಿಗಳು:** –

**ಪಿರ್ಯಾಧಿದಾರರು:** ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಹಾಸನ.

**ವಾಹನದ ಮಾಲೀಕರು:** ಇಲ್ಲ

**ಕರ್ನಾಟಕ ಅರಣ್ಯ ಕಾಯಿದೆ 1963ರ – 104(ಎ), 62, 71ಎ ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ನಿಯಮ 144, 165ರ ಪ್ರಕಾರ ಅಪರಾಧ**

**ಪ್ರಸ್ತಾವನೆ:**

ದಿನಾಂಕ: 7.7.2006 ರಂದು ಈ ವಿಭಾಗದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು, ಮತ್ತು ಸಿಬ್ಬಂದಿ ವರ್ಗದವರು ರಾತ್ರಿ 8.45 ಗಂಟೆ ಸಮಯದಲ್ಲಿ ಗಸ್ತು ಪಹರೆ ಕಾಯುತ್ತಿರುವಾಗ ಬೇಲೂರು ತಾ: ಬೇಲೂರು–ಬಿಕ್ಕೋಡು ರಸ್ತೆಯಲ್ಲಿ ಬೇಲೂರು ಕಡೆಯಿಂದ ಬರುತ್ತಿದ್ದ 3 ಚಕ್ರದ ಗೂಡ್ಸ್ ಆಟೋವನ್ನು ವಾಹನವನ್ನು ಪರಿಶೀಲಿಸುವ ಸಲುವಾಗಿ ನಿಲ್ಲಿಸಲು ಸೂಚನೆ ನೀಡಿದಾಗ, ಸ್ವಲ್ಪ ದೂರ ಹೋಗಿ ನಿಲ್ಲಿಸಿ ಅದರಲ್ಲಿದ್ದ ಚಾಲಕನು ಓಡಿ ಹೋಗಿದ್ದು, ಸದರಿ ವಾಹನದ

ಹತ್ತಿರ ಹೋಗಿ ನೋಡಲಾಗಿ ಅದು ಆಟೋ ಗೂಡ್ಸ್ ವಾಹನವಾಗಿದ್ದು, ಅದರ ನಂ: ಕೆಎ–15–2286 ಇಂಜಿನ್ ನಂ: ಆರ್.100944 ಹೆಚ್.ಒ.ಚಾಸೀಸ್ ನಂ: ಬಿಬಿಜೆಒ–12435, "ಮಾ ಕೀ ದುವಾ" ನಾಮಫಲಕ ಹೊಂದಿದ್ದು, ಸದರಿ ವಾಹನದ ಒಳಗೆ 6 ಬೀಟೆ ಸೈಜು 0.103 ಎಂ3 ಯನ್ನು ತುಂಬಿದ್ದು, ಅವುಗಳ ಮೇಲೆ ಯಾವುದೇ ಇಲಾಖಾ ಛಾಪ ಗುರುತು ಕಂಡು ಬರದ ಕಾರಣ, ಸದರಿ ಗೂಡ್ಸ್ ಆಟೋ ಮತ್ತು ಅದರಲ್ಲಿದ್ದ ಬೀಟೆ ಸೈಜು 6:0.103 ಎಂ3 ಯನ್ನು ಸರ್ಕಾರದ ಪರ ಅಮಾನತ್ತು ಪಡಿಸಿ, ಮಹಜರ್ ಕ್ರಮ ಜರುಗಿಸಿ ಅರಣ್ಯ ಮೊಕದ್ದಮೆ ನಂ.16/2006–07, ದಿನಾಂಕ: 7.7.2006 ನ್ನು ದಾಖಲಿಸಿ, **ಕರ್ನಾಟಕ ಅರಣ್ಯ ಕಾಯಿದೆ 1963ರ – 104(ಎ), 62, 71ಎ ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ನಿಯಮ 144, 165ರ ಪ್ರಕಾರ** ಕಾನೂನು ಕ್ರಮ ಜರುಗಿಸಲು ಪ್ರಥಮ ವರ್ತಮಾನದ ವರದಿ, ಸೀಜರ್ ವರದಿ ಮತ್ತು ಮಹಜರ್‌ನೊಂದಿಗೆ ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಹಾಸನ ಇವರ ಮುಂದೆ ಹಾಜರು ಪಡಿಸಿರುತ್ತಾರೆ.

ಈ ಮೊಕದ್ದಮೆಗೆ ಸಂಬಂಧಿಸಿದಂತೆ, ಸದರಿ ವಾಹನದ ಬಗ್ಗೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71–ಎ ಪ್ರಕಾರ 30 ದಿವಸಗಳ ಕಾಲಾವಕಾಶ ಕೊಟ್ಟು ವಾಹನದ ಮಾಲೀಕರು/ವಾರಸುದಾರರು ಯಾರಾದರೂ ಇದ್ದಲ್ಲಿ ವಾಹನಕ್ಕೆ ಸಂಬಂಧಿಸಿದಂತೆ, ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಗಳನ್ನು ಈ ನ್ಯಾಯಾಲಯದ ಮುಂದೆ ಹಾಜರಾಗಿ ತಮ್ಮ ಮಾಲೀಕತ್ವವನ್ನು ರುಜುವಾತು ಪಡಿಸುವುದು ತಪ್ಪಿದಲ್ಲಿ ವಾಹನ ಮತ್ತು ಬೀಟೆ ಸೈಜುಗಳನ್ನು ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಎಂದು ಪ್ರಕಟಣೆಯನ್ನು ದಿನಾಂಕ: 5.12.2006 ರಂದು ದಿನಪತ್ರಿಕೆಯಲ್ಲಿ ಸದರಿ ಹೊರಡಿಸಿದಾಗ್ಯೂ, ಇದೂವರೆವಿಗೂ ಯಾರೂ ಕ್ಲೈಮ್ಸ್ ಹಾಜರಾಗಿರುವುದಿಲ್ಲ. ವಾಹನದ ವಾರಸುದಾರರ ಬಗ್ಗೆ ಮಾಹಿತಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಪತ್ರ ಬರೆದು ಕೋರಲಾಗಿ ಯಾವುದೇ ಮಾಹಿತಿ ಬಂದಿರುವುದಿಲ್ಲ.

ಮುಂದುವರಿದು ಹಾಲಿ ವಾಹನದ ವಾರಸುದಾರರು ಇದುವರೆವಿಗೂ ಪತ್ತೆಯಾಗದೇ ಇರುವುದರಿಂದ ಹಾಗೂ ನಿಗದಿತ ಕಾಲಾವಕಾಶ ಈಗಾಗಲೇ ಮುಗಿದಿದ್ದು, ಈ ಮೊಕದ್ದಮೆಗೆ ಸಂಬಂಧಿಸಿದಂತೆ ಸಾಕಷ್ಟು ಕಾಲಾವಕಾಶ ನೀಡಿದ್ದರೂ ಕೂಡ ವಾಹನದ ವಾರಸುದಾರರು ಮೂಲ ದಾಖಲಾತಿಗಳನ್ನು ಹಾಜರು ಪಡಿಸಿ, ಮಾಲೀಕತ್ವವನ್ನು ರುಜುವಾತು ಪಡಿಸಿ ತಾವು ತಪ್ಪಿತಸ್ಥರಲ್ಲವೆಂದು ಸಾಬೀತು ಪಡಿಸಲು ವಿಫಲರಾದ ಕಾರಣ ಈ ಪ್ರಕರಣದಲ್ಲಿ ವಾಹನ ಗೂಡ್ಸ್ ಆಟೋ ಹಾಗೂ ಅದರಲ್ಲಿ ತುಂಬಿದ್ದ ಅರಣ್ಯ ಉತ್ಪನ್ನ ಬೀಟೆ ಸೈಜು 6:0.103 ಎಂ3 ಬಗ್ಗೆ ಏಕಪಕ್ಷೀಯವಾಗಿ ಇತ್ಯರ್ಥ ಪಡಿಸಲು ತೀರ್ಮಾನಿಸಲಾಯಿತು.

ಈ ಕೇಸಿನಲ್ಲಿಯ ಪ್ರಥಮ ವರ್ತಮಾನದ ವರದಿ, ಪಂಚನಾಮೆ ಮತ್ತು ಪ್ರಸ್ತುತ ಕೇಸಿನಲ್ಲಿ ಹಾಜರುಪಡಿಸಿದ ದಾಖಲೆಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಲಾಗಿ, ಈ ಕೇಸಿನಲ್ಲಿ ವಾಹನದ ಮಾಲೀಕರಿಗೆ ಈ ಘಟನೆಯ ಬಗ್ಗೆ ಸಂಪೂರ್ಣ ತಿಳುವಳಿಕೆ ಇತ್ತು. ಮತ್ತು ಸದರಿಯವರು ಬುದ್ಧಿಪೂರ್ವಕವಾಗಿಯೇ ತಮ್ಮ ವಾಹನವನ್ನು ಅರಣ್ಯ ಇಲಾಖೆಗೆ ಸೇರಿದ ಮಾಲನ್ನು ಕಳ್ಳತನದಿಂದ ಸಾಗಿಸುವ ಕುರಿತು ಆರೋಪಿತರಿಗೆ ಹಸ್ತಾಂತರಿಸಿದ್ದಾಗಿ ಕಂಡು ಬರುತ್ತದೆ. ಅಲ್ಲದೇ ಈ ಕಾರಣಕ್ಕೆ ವ್ಯತಿರಿಕ್ತವಾದ ಬೇರೆ ಕಾರಣಗಳು ಈ ಕೇಸಿನಲ್ಲಿ ಇರುವುದಿಲ್ಲ. ಆದುದರಿಂದ ಈ ಕೇಸಿನ ಸಂಗತಿ ಹಾಗೂ ಸಂದರ್ಭಗಳಡಿಯಲ್ಲಿ ಕೆಳಗಿನಂತೆ ಸದರಿ ವಾಹನವನ್ನು ಮುಟ್ಟುಗೋಲು ಹಾಕಲು ಆದೇಶ ಹೊರಡಿಸಿದೆ.

**ಆದೇಶ**

ಮೇಲೆ ವಿವರಿಸಿದ ಅಂಶಗಳನ್ನು ಕಡತದೊಂದಿಗೆ ಪೂರ್ತಿಯಾಗಿ ಪರಿಶೀಲಿಸಿ ಕರ್ನಾಟಕ ಫಾರೆಸ್ಟ್ ಆಕ್ಟ್ 71–ಎ ರನ್ವಯ ಪ್ರಕರಣದಲ್ಲಿ ಅಮಾನತ್ತು ಪಡಿಸಿದ ವಾಹನ ಗೂಡ್ಸ್ ಆಟೋ ನಂ. ಕೆಎ–15–2286–ಮಾಲೀಕರು ತಮ್ಮ ವಾಹನದಲ್ಲಿ ತಮ್ಮ ಬುದ್ಧಿ ಪೂರ್ವಕವಾಗಿ ಬೀಟೆ ಸೈಜು 6:0.103 ಎಂ3 ಯನ್ನು ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿದ್ದು ರುಜುವಾತು ಆಗಿದ್ದು, ಶ್ರೀ ಸಿ.ಝಡ್.ಸೈಯದ್ ಗಫಾರ್, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಹಾಸನ ಆದ ನಾನು ಈ ಮೂಲಕ ಅರಣ್ಯ, ಸಂಚಾರಿ ದಳ, ಹಾಸನದ ಅಮೊ: 16/2006–07 ದಿನಾಂಕ: 7.7.2006 ರಲ್ಲಿ ಅಮಾನತ್ತು ಪಡಿಸಿದ ಈ ಕೆಳಕಾಣಿಸಿದ ವಾಹನ ಗೂಡ್ಸ್ ಆಟೋ ಕೆಎ–15–2286– ಮತ್ತು ಅದರಲ್ಲಿ ತುಂಬಿದ್ದ ಬೀಟೆ ಸೈಜು 6:0.103 ಎಂ3 ಯನ್ನು ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

**ಮುಟ್ಟುಗೋಲು ಹಾಕಿದ ವಾಹನದ ವಿವರ:**

ಗೂಡ್ಸ್ ಆಟೋ ಕೆಎ–15–2286 "ಮಾ ಕೀ ದುವಾ" ನಾಮಫಲಕ

ಇಂಜಿನ್ ನಂ: ಆರ್.100944 ಹೆಚ್.ಒ.

ಚಾಸೀಸ್ ನಂ: 9ಡಿ ಜೆಒ–12435,

ಈ ಆದೇಶವನ್ನು ಹೊರಡಿಸಿದ 30 (ಮೂವತ್ತು) ದಿನಗಳೊಳಗಾಗಿ ಯಾವುದೇ ಮೇಲ್ಮನವಿಯನ್ನು ಸಂಬಂಧಿಸಿದವರು ಸಲ್ಲಿಸದೇ ಇದ್ದ ಪಕ್ಷದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಈ ಆದೇಶವನ್ನು ಇಂದು ದಿನಾಂಕ: 18.7.2007 ರಂದು ತೆರೆದ ನ್ಯಾಯಾಲಯದಲ್ಲಿ ಹೇಳಿ, ಬೆರಳಚ್ಚು ಮಾಡಿಸಿ ಸರಿಪಡಿಸಿ ಹೊರಡಿಸಲಾಗಿದೆ.

**ಸಿ.ಝಡ್. ಸೈಯದ್ ಗಫಾರ್**

ಪಿ.ಆರ್.1065

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಹಾಸನ.

**URBAN DEVELOPMENT DEPARTMENT**

**ERRATUM**

**NO. UDD 235 MNX 2006, Bangalore, Dated: 14th August 2007**

The date of Notification No. UDD 235 MNX 2006, shall be read as "dated: 20.06.2007" instead of "dated: 20.06.2006."

By Order and in the name of the Governor of Karnataka,
M.S. PREMACHANDRA
Under Secretary to Government,
Urban Development Department.

P.R.1111

**URBAN DEVELOPMENT DEPARTMENT**

**NOTIFICATION**

**NO. UDD 294 MNX 2001, Bangalore, Dated: 14th August 2007**

In exercise of the powers conferred by sub-section (1) of Section-48 of the Land Acquisition Act-1894 (Central Act-1894) the Government of Karnataka hereby withdraw from acquisition the lands specified in the schedule in respect of which the Preliminary Notification was published in the Karnataka Gazette dated: 06.04.1989 in Part-III at pages from 308 to 328 vide Notification No. BDA/SLAO/A1/324/88-89, dated: 29.12.1988 and Final Notification NO. UDD 436 MNX 1997 dated: 16.09.1997 was published in the Karnataka Gazette dated: 17.09.1997 under sub-section (1) of Section-19 of BDA Act 1976 (Karnataka Act-12 of 1976) for formation of layout Called "BANASHANKARI 5TH STAGE LAYOUT".

**SCHEDULE**

**DISTRICT: BANGALORE** **TALUK: BANGALORE SOUTH** **HOBLI: UTTARAHALLI** **VILLAGE: UTTARAHALLI**

| Sl. No. | Name of the Khatedar/ Anubhavadar | Sy. No. | Dry/Wet/ Garden | Total Extent | Kharab | Remaining Extent | Assess ment | Extent Acquired | Extent with drawn | BOUNDARIES | | | |
|---|---|---|---|---|---|---|---|---|---|---|---|---|---|
| | | | | | | | | | | East Sy.No. | West Sy.No. | North Sy.No. | South Sy.No. |
| | **Sri/Smt.** | | | A-G | A-G | A-G | Rs.Ps. | A-G | A-G | | | | |
| 01 | Y.G. Giridhara | 103/1 | Gdn. | 0-36 | - | 0-36 | 3-24 | 0-36 | 0-36 | 103/2 | 98 | 111 | 104 |
| 02 | Y.G. Ramkumar | 103/2 | Gdn. | 0-39 | 0-02 | 0-37 | 1-85 | 0-39 | 0-39 | 106 | 103/1 | 111 | 42 |

**TOTAL EXTENT WITH DRAWN 01 ACRE 35 GUNTAS (One Acre and Thirty Five Guntas Only)**

By Order and in the name of the Governor of Karnataka,
M.S. PREMACHANDRA
Under Secretary to Government,
Urban Development Department.

P.R.1112

## ಕಾರ್ಖಾನೆ ಮತ್ತು ಬಾಯ್ಲರುಗಳ ಇಲಾಖೆ

## ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶಕರ ಕಛೇರಿ, ಕಾರ್ಮಿಕ ಭವನ, 2ನೇ ಮಹಡಿ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29

## ಅಧಿಸೂಚನೆ

**ಸಂಖ್ಯೆ: ಬಿಎಲ್ಆರ್–4/ ಬಿಓಇ/ ಸಿಆರ್–01/ 06–07, ದಿನಾಂಕ:20ನೇ ಜೂನ್, 2007**

**ವಿಷಯ:** ಇಲಾಖೆಯು 2007ನೇ ಸಾಲಿನ ಫೆಬ್ರವರಿ ತಿಂಗಳಿನಲ್ಲಿ ನಡೆಸಿದ ಲಿಖಿತ ಪರೀಕ್ಷೆ ಹಾಗೂ ಮೇ ತಿಂಗಳಿನಲ್ಲಿ ಬೆಂಗಳೂರಿನಲ್ಲಿ ನಡೆಸಿದ ಮೌಖಿಕ ಬಾಯ್ಲರ್ ಆಪರೇಷನ್ ಇಂಜಿನಿಯರ್ಸ್ ಪರೀಕ್ಷೆಯಲ್ಲಿ ತೇರ್ಗಡೆಯಾದ ಅಭ್ಯರ್ಥಿಗಳ ಪಟ್ಟಿ ಪ್ರಕಟಣೆ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಅಧಿಸೂಚನೆ ಕಾಇ 33 ಕಾಬಾಸೇ 2006, ದಿನಾಂಕ:20.06.2006.

2) ಈ ಕಛೇರಿಯ ಪತ್ರ ಸಂಖ್ಯೆ: ಬಿಎಲ್ಆರ್–4/ ಬಿಓಇ/ ಸಿಆರ್–01/ 06–07, ದಿನಾಂಕ:02.11.2006.

ಉಲ್ಲೇಖದಲ್ಲಿ ಸೂಚಿಸಿರುವ ಸರ್ಕಾರದ ಅಧಿಸೂಚನೆಯಲ್ಲಿ ಬಾಯ್ಲರ್ ಆಪರೇಷನ್ ಇಂಜಿನಿಯರ್ಸ್ ಪರೀಕ್ಷೆ ಮಂಡಳಿಯನ್ನು ರಚಿಸಲಾಗಿದೆ. ಕರ್ನಾಟಕ ಬಾಯ್ಲರ್ ಆಪರೇಷನ್ ಇಂಜಿನಿಯರ್ಸ್ 1959ರ ಅನ್ವಯ ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶಕರು, ಬೆಂಗಳೂರು ರವರ ಅಧ್ಯಕ್ಷತೆಯಲ್ಲಿ 2007ನೇ ಸಾಲಿನ ಫೆಬ್ರವರಿ ತಿಂಗಳಿನಲ್ಲಿ ನಡೆಸಿದ ಲಿಖಿತ ಪರೀಕ್ಷೆ ಹಾಗೂ ಮೇ ತಿಂಗಳಿನಲ್ಲಿ ಬೆಂಗಳೂರಿನಲ್ಲಿ ನಡೆಸಿದ ಮೌಖಿಕ ಬಾಯ್ಲರ್ ಆಪರೇಷನ್ ಇಂಜಿನಿಯರ್ಸ್ ಪರೀಕ್ಷೆಯನ್ನು ನಡೆಸಲಾಗಿದ್ದು, ಈ ಪರೀಕ್ಷೆಯಲ್ಲಿ ತೇರ್ಗಡೆಯಾದ ಅಭ್ಯರ್ಥಿಗಳ ಹೆಸರುಗಳನ್ನು ನಿಯಮ 40ರಂತೆ ಗೆಜೆಟ್‌ನಲ್ಲಿ ಪ್ರಕಟಿಸಬೇಕಾದ ಹಿನ್ನೆಲೆಯಲ್ಲಿ ಕೆಳಗೆ ಕಾಣಿಸಿದ ಅಭ್ಯರ್ಥಿಗಳು ತೇರ್ಗಡೆಯಾಗಿರುತ್ತಾರೆ ಎಂದು ಈ ಮೂಲಕ ಘೋಷಿಸಿದೆ.

| ಕ್ರಮ ಸಂಖ್ಯೆ | ನೋಂದಣಿ ಸಂಖ್ಯೆ | ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ<br>ಶ್ರೀ/ ಶ್ರೀಮತಿ: |
|---|---|---|
| 1. | 01 | ಮಲ್ಲಿಕಾರ್ಜುನ್ ಮುದ್ದ,<br>ಬಿ–II/2, ಜೆ.ವಿ.ಎಸ್.ಎಲ್. ಟೌನ್‌ಶೀಪ್ ವಿದ್ಯಾನಗರ–583275, ಸಂಡೂರು ತಾಲ್ಲೂಕು,<br>ಬಳ್ಳಾರಿ ಜಿಲ್ಲೆ. |
| 2. | 02 | ಎಂ.ಕೆ. ರಾಜೇಂದ್ರ,<br>C/o ನಕುಲ್‌ಸ್ವಾಮಿ, ಕೃಷ್ಣಂಬುದಿ, ಟಿ.ಬಿ. ಸರ್ಕಲ್, ವಾಣಿಶುಗರ್ (ಪಿ), ಹಿರಿಯೂರು ತಾಲ್ಲೂಕು,<br>ಚಿತ್ರದುರ್ಗ ಜಿಲ್ಲೆ. |
| 3. | 03 | ಎನ್. ಕುಮಾರ್,<br>ಮೆ: ಆರ್.ಕೆ. ಪವರ್‌ಜೆನ್ (ಪ್ರೈ) ಲಿ, 5ನೇ ಕಿಮಿ, ಚಳ್ಳಕೆರೆ ರಸ್ತೆ, ಹಿರಿಯೂರು–572 144,<br>ಚಿತ್ರದುರ್ಗ ಜಿಲ್ಲೆ. |
| 4. | 04 | ಪಿ. ಶೇಖರ್,<br>ಚೆನ್ನಾಕಲ್ ಪದ್ದೂರ್, ಮನಪಳ್ಳಿ ಪೋಸ್ಟ್, ಪರಮತಿ–ವೇಲೂರು ತಾಲ್ಲೂಕು,<br>ನಾಮಕಲ್ ಜಿಲ್ಲೆ–637 017. |
| 5. | 05 | ತಮ್ಮಿನೇನಿ ಸುಧಾಕರ್ ಬಾಬು,<br>20–6–8, ಸುಬ್ಬರಾವ್ ಸ್ಟ್ರೀಟ್, ಚಿನ್ನರವುರು ತೆನಾಲಿ, ಗುಂಟೂರು ಜಿಲ್ಲೆ, ಆಂಧ್ರಪ್ರದೇಶ. |
| 6. | 07 | ಪಿ. ದಿವಾಕರ್,<br>ಶ್ರೀ ಲಕ್ಷ್ಮಿ ವೆಂಕಟೇಶ್ವರ ನಿಲಯ, ಸರ್ ಎಂ.ವಿ. ನಗರ, ಬಲ 8ನೇ ಅಡ್ಡರಸ್ತೆ, ಸತ್ಯ ಜನರಲ್ ಆಸ್ಪತ್ರೆ<br>ಹತ್ತಿರ, ಬಳ್ಳಾರಿ–583 103. |
| 7. | 12 | ದೇವೇಂದ್ರ ಎಂ. ಪತ್ತರ್,<br>C/o. ಈರಪ್ಪ ಕೌಜಲಗಿ, ನ್ಯೂ ಬಿಲ್ಡಿಂಗ್, ಎಸ್.ವಿ.ಎಂ. ಹೈಸ್ಕೂಲ್ ಹಿಂದೆ, ಆಟ್ ಪೋಸ್ಟ್,<br>ಸಮೀರ್‌ವಾಡಿ–587 316, ಮುಧೋಳ ತಾಲ್ಲೂಕು, ಬಾಗಲಕೋಟೆ ಜಿಲ್ಲೆ. |
| 8. | 13 | ಶಬರಿನಾಥ್ ಎನ್.<br>ಗಂಗಾವತಿ ಶುಗರ್ಸ್ ಲಿ, ಪೋಸ್ಟ್ ಪ್ರಗತಿನಗರ್, ಗಂಗಾವತಿ ತಾಲ್ಲೂಕು, ಜಿಲ್ಲೆ: ಕೊಪ್ಪಳ<br>ಪಿನ್–583 267. |
| 9. | 14 | ವಿ.ಎಸ್.ಎಸ್. ಶ್ರೀನಿವಾಸ್,<br>ಕ್ಯು. ನಂ.ಎಫ್–98, ಎ.ಪಿ.ಆರ್. ಕಾಲೋನಿ, ಕಮಲಪುರಂ (ಅಂಚೆ), ಮಂಗಪೇಟೆ (ಮಂಡಲ್),<br>ವಾರಂಗಲ್ ಜಿಲ್ಲೆ:506 172. |

| ಕ್ರಮ ಸಂಖ್ಯೆ | ನೋಂದಣಿ ಸಂಖ್ಯೆ | ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ<br>ಶ್ರೀ/ ಶ್ರೀಮತಿ: |
|---|---|---|
| 10. | 18 | ರಂಗನಾಥ್ ಎ.ಎಂ.<br>S/o.ಮಹೇಶ್ವರಪ್ಪ ಎ.ಡಿ. ನಂ.175, 10ನೇ ಕ್ರಾಸ್, 'ಎ' ಬ್ಲಾಕ್, ದೇವರಾಜ್ ಅರಸ್ ಲೇಔಟ್, ದಾವಣಗೆರೆ–577 006. |
| 11. | 19 | ಮಂಜುನಾಥ್ ಎನ್.<br>S/o. ಯಂಕಪ್ಪ ಎನ್. ನಾಗಲಿಂಗೇಶ್ವರ ದೇವಸ್ಥಾನ ಎದುರು, ಅಡೋನಿ ರಸ್ತೆ, ಸಿರುಗುಪ್ಪ, ಬಳ್ಳಾರಿ ಜಿಲ್ಲೆ. |
| 12. | 21 | ಗೊಲ್ಲ ಚಂದ್ರಶೇಖರ್ ಯಾದವ್,<br>C/o. ಎಸ್. ಕಾಸಿಮ್ ಸಾಬ್, ವಿ.ವಿ. ನಗರ, ಡಿ.ನಂ.ಎಫ್–108, 10ನೇ ವಾರ್ಡ್, ಸಿರುಗುಪ್ಪ–583 121, ಬಳ್ಳಾರಿ ಜಿಲ್ಲೆ. |
| 13. | 23 | ಸುಂಕರ ಪ್ರವೀರ್ಣ ಕುಮಾರ್,<br>ಕ್ವ. ನಂ. ಖ 7/5, ವಿದ್ಯಾನಗರ, ಜಿಂದಲ್ ಟೌನ್‌ಶೀಪ್, ತೋರಣಗಲ್ಲು, ಬಳ್ಳಾರಿ ಜಿಲ್ಲೆ. |
| 14. | 26 | ಅಜೀ ಜೆಕಾಬ್ ಪಿ.<br>ನಂ.1 ಬೋಜರಾಜ್ ಬಿಲ್ಡಿಂಗ್, ಬರ್ಕಿ ಸಣ್ಣನಗರ, ಕುಲ್ಶೈ, ಮಂಗಳೂರು– 575 019 |
| 15. | 27 | ಚಂದ್ರಶೇಖರ್ ಜಿ.<br>C/o. ಎ.ಹೆಚ್. ಕೊಲಾಚಿ, ವಿದ್ಯಾನಗರ್, ಮಹಾಲಿಂಗಪುರ, ಮುಧೋಳ್ ತಾಲ್ಲೂಕು, ಬಾಗಲಕೋಟೆ–587 312. |
| 16. | 30 | ಮಹೇಶ್ ಬಿ. ಎಇ(ಎಂ), ಟಿ–ಬಿ/ 125, ಆರ್.ಟಿ.ಪಿ.ಎಸ್. ಕಾಲೋನಿ, ಶಕ್ತಿನಗರ–554 170 |
| 17. | 33 | ಸುಧಾಕರ್ ಬಿ.,<br>ಲಕ್ಷ್ಮಿ ನಿಲಯ, ಚೆಕ್ ಪೋಸ್ಟ್ ಹತ್ತಿರ, ವಿದ್ಯಾನಗರ, ಮಹಾಲಿಂಗಪುರ್, ಮುಧೋಳ ತಾಲ್ಲೂಕು, ಬಾಗಲಕೋಟೆ ಜಿಲ್ಲೆ. |
| 18. | 35 | ಇಂತಿಯಾಜ್ ಹಿರೇಹಾಳ್,<br>C/o. ಪಿ. ಕಾಸಿಮ್ ಸಾಬ್, ಟಿ.ಬಿ. ಬೋರ್ಡ್ ಕ್ವಾಟರ್ಸ್, ಇ–ಎಸ್3, ಅಮರಾವತಿ, ಇನ್ಸ್‌ಪೆಕ್ಷನ್ ಬಂಗ್ಲೋ ಹತ್ತಿರ, ಹೊಸಪೇಟೆ, ಬಳ್ಳಾರಿ ಜಿಲ್ಲೆ. |
| 19. | 36 | ಜೆ. ಭಾಸ್ಕರನ್,<br>S/o. ಎನ್. ಜಾನಕಿ ರಾಮನ್, ನಂ.41/ಎ/2, ವೀರಟೇಶ್ವರನ್ ಕೋಯಿಲ್ ಸ್ಟ್ರೀಟ್, ತಿರುವತ್ತಿಗೋಳ್, ಪನರುತಿ, ಕಡಲೋರ್ ಜಿಲ್ಲೆ, ತಮಿಳು ನಾಡು ಪಿನ್–607 106. |
| 20. | 37 | ಹೆಚ್.ಎನ್. ಜಗದೀಶ<br>ಅಸಿಸ್ಟೆಂಟ್ ಇಂಜಿನಿಯರ್, ಮೆ: ಎಸ್.ಸಿ.ಎಂ. ಶುಗರ್ಸ್ ಲಿ, ಕೊಪ್ಪ ವಿಲೇಜ್ ಪೋಸ್ಟ್, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ. |
| 21. | 40 | ಗಂಗಾಧರ್ ಓ.<br>ಅಸಿಸ್ಟೆಂಟ್ ಮ್ಯಾನೇಜರ್, ಪವರ್ ಪ್ಲಾಂಟ್, ಮೆ: ಗ್ರಾಸಿಂ ಇಂಡಸ್ಟ್ರೀಸ್ ಲಿ, ಗ್ರಾಸಿಲಿನ್ ಡಿವಿಜನ್, ಕುಮಾರಪಟ್ಟಣಂ–581 123, ಹಾವೇರಿ ಜಿಲ್ಲೆ. |
| 22. | 41 | ದಮೇರ ಶ್ರೀನಿವಾಸ ಕುಮಾರ್,<br>C/o. ರಾಜು, ಕೇರಾಫ್ ಶ್ರೀ ಸೂಗುರೇಶ್ವರ ಸೈಕಲ್ ಸ್ಟೋರ್ಸ್, ಮುಖ್ಯ ರಸ್ತೆ, ಕರಟಗಿ–583 229, ಗಂಗಾವತಿ ತಾಲ್ಲೂಕು, ಕೊಪ್ಪಳ ಜಿಲ್ಲೆ. |
| 23. | 43 | ಸಂತೋಷ್ ದುಂಡಯ್ಯ ಹಳಕರ್ಣಿಮಠ,<br>ಕ್ವಾರ್ಟರ್ಸ್ ನಂ. ಜೆ–139, ಮೆ: ಹಿಂಡಾಲ್ಕೊ ಇಂಡಸ್ಟ್ರೀಸ್ ಲಿ, ಹಿಂಡಾಲ್ಕೊ ಕಾಲೋನಿ, ಬೆಳಗಾಂ–590 010. |
| 24. | 44 | ನಾರಾಯಣ್ ಬಕಾಳೆ,<br>ಅಸಿಸ್ಟೆಂಟ್ ಮ್ಯಾನೇಜರ್, ಮೆ: ಪವರ್ ಪ್ಲಾಂಟ್, ಗ್ರಾಸಿಂ ಇಂಡಸ್ಟ್ರೀಸ್ ಲಿ, ಗ್ರಾಸಿಲಿನ್ ಡಿವಿಜನ್, ಕುಮಾರಪಟ್ನಂ–581 123, ಹಾವೇರಿ ಜಿಲ್ಲೆ. |

| ಕ್ರಮ ಸಂಖ್ಯೆ | ನೋಂದಣಿ ಸಂಖ್ಯೆ | ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ<br>ಶ್ರೀ/ ಶ್ರೀಮತಿ |
|---|---|---|
| 25. | 45 | ಎಸ್. ಸುರೇಶ್,<br>ಮನೆ ನಂ.144, ಎಂ.ಆರ್.ಪಿ.ಎಲ್. ಟೌನ್‌ಶಿಪ್, ಕುತ್ತೆತ್ತೂರು (ಪಿ.ಓ.) ಕಟಿಪಲ್ಲ,<br>ಮಂಗಳೂರು–575 030. |
| 26. | 46 | ಪ್ರದೀಪ್ ಎಂ.<br>ಹೆಚ್.32, ಎಂ.ಆರ್.ಪಿ.ಎಲ್. ಟೌನ್‌ಶಿಪ್, ಕುತ್ತೆತ್ತೂರು (ಪಿ.ಓ), ಮಂಗಳೂರು–575 030 |
| 27. | 47 | ಅಮರೇಶ್ ಎಂ.<br>ಮನೆ ನಂ. ಟೈಪ್ ಬಿ–19, ಆರ್.ಟಿ.ಪಿ.ಎಸ್. ಕಾಲೋನಿ, ಶಕ್ತಿನಗರ–584170, ರಾಯಚೂರು ಜಿಲ್ಲೆ. |
| 28. | 50 | ಪಿ.ಎನ್. ಮಂಜುನಾಥ,<br>ಕ್ವಾರ್ಟರ್ಸ್ ನಂ. ಟೈಪ್ 5/58, ಆರ್.ಟಿ.ಪಿ.ಎಸ್. ಕಾಲೋನಿ, ಶಕ್ತಿನಗರ–584170,<br>ರಾಯಚೂರು ಜಿಲ್ಲೆ. |
| 29. | 51 | ವಿರೂಪಾಕ್ಷಪ್ಪ ಶ್ರೀಕಾಂತ್ ಕಟ್ಟಿ,<br>ಅಟ್ ಪೋಸ್ಟ್: ಬೆಲ್ಲದ ಬಾಗೇವಾಡಿ, ಹುಕ್ಕೇರಿ ತಾಲ್ಲೂಕು, ಜಿಲ್ಲೆ, ಬೆಳಗಾಂ–591 305. |
| 30. | 53 | ಪಿ. ಶ್ಯಾಮ್ ಪ್ರಸಾದ್,<br>ಸಿ.ಎಫ್. ಬಾಯ್ಲರ್ಸ್ ಡಿವಿಜನ್, ಪವರ್ ಬ್ಲಾಕ್, ಮೆ: ಎಂ.ಪಿ.ಎಂ. ಲಿ., ಭದ್ರಾವತಿ. |
| 31. | 54 | ಸೂರಜ್ ಪಿ. ಕುರಿಯಕೋಸ್,<br>ಡಿ 6/6, ವಿದ್ಯಾನಗರ, ಜೆ.ವಿ.ಎಸ್.ಎಲ್. ಟೌನ್‌ಶಿಪ್, ತೋರಣಗಲ್ಲು, ಬಳ್ಳಾರಿ, ಕರ್ನಾಟಕ. |
| 32. | 60 | ಅರುಣ್ ಬಿ. ಚೌಗಲ,<br>ಅಟ್ ಪೋಸ್ಟ್ ಹುಲ್ಲೋಳಿ, ಹುಕ್ಕೇರಿ ತಾಲ್ಲೂಕು, ಬೆಳಗಾಂ ಜಿಲ್ಲೆ–591 309. |
| 33. | 62 | ಮಾರ್ಕಂಡೇಶ್ ಮಹಾದೇವಪ್ಪ ಐಲಿ,<br>C/o. ಬಿ. ಜಿತೇಂದ್ರನಾಥ, ಮುಖ್ಯ ರಸ್ತೆ, ಫಸ್ಟ್ ವಾರ್ಡ್, ಕಳಮರೇಶ್ವರ ದೇವಸ್ಥಾನ ಹತ್ತಿರ, ಪೋಸ್ಟ್ ಚಿತ್ತವಾಡಗಿ–583211, ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ. |
| 34. | 64 | ಎಂ. ಜಗದೀಶ್,<br>ಮನೆ ನಂ. ಬಿ–2–7, ವಿದ್ಯಾನಗರ ಟೌನ್‌ಶಿಪ್, ತೋರಣಗಲ್ಲು–583275, ಬಳ್ಳಾರಿ ಜಿಲ್ಲೆ. |
| 35. | 66 | ಮಹೇಶ್ ರೆಡ್ಡಿ ಟಿ.<br>S/o. ನಾಗರಾಜ್ ರೆಡ್ಡಿ, ಟಿ. ಕಂಪ್ಲಿ ಪೋರ್ಟ್–583132. |
| 36. | 67 | ರಾಜಶೇಖರ್ ಎಸ್. ಅಂಗಡಿ,<br>C/o. ಎ. ಶಂಕರನಾರಾಯಣ, 4/328 ಬಿ, ಪಟೇಲ್‌ನಗರ, ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ, ಪಿನ್–583201. |
| 37. | 68 | ರಮೇಶ್ ಜಿ.ವಿ.<br>ಟಿ5/ 62, ಆರ್.ಟಿ.ಪಿ.ಎಸ್. ಕಾಲೋನಿ, ಶಕ್ತಿನಗರ–584170, ರಾಯಚೂರು. |
| 38. | 70 | ಅಬ್ದುಲ್‌ಬಾಷಾ,<br>C/o. ಅಬ್ದುಲ್ ರಜಾಕ್ ಸಾಬ್, ಪಿ.ಡ್ಬ್ಲ್ಯುಡಿ ಕಂಟ್ರ್ಯಾಕ್ಟರ್, ಎಸ್.ಹೆಚ್. ರಸ್ತೆ, ಮಲೆಬೆನ್ನೂರ್, ಹರಿಹರ, ದಾವಣಗೆರೆ ಜಿಲ್ಲೆ. |
| 39. | 74 | ರತ್ನ ಸುಧಾಕರ್ ಅಣ್ಣೆ,<br>C/o. ನಕುಲ್ ಸ್ವಾಮಿ, ಕೃಷ್ಣಂಬುದಿ, ಟಿ.ಬಿ. ಸರ್ಕಲ್, ವಾಣಿ ಶುಗರ್ ಪ್ಯಾಕ್ಟರಿ, ಹಿರಿಯೂರು–572144, ಚಿತ್ರದುರ್ಗ ಜಿಲ್ಲೆ. |
| 40. | 81 | ಪ್ರವೀಣ್‌ಕುಮಾರ್ ತಾರೆ,<br>ಅಟ್/ ಪೋಸ್ಟ್, ಭೋಜ್, ಚಿಕ್ಕೋಡಿ ತಾ: ಬೆಳಗಾಂ ಜಿಲ್ಲೆ–591263. |
| 41. | 83 | ಅನಿಲ್ ಕುಮಾರ್ ಕಾಟ್ರಗಡ್ಡ,<br>18–214, ಬಾಪು ನಗರ, ನುಜ್ವಿಡ್–521 201, ಕೃಷ್ಣ ಜಿಲ್ಲೆ, ಆಂಧ್ರಪ್ರದೇಶ. |
| 42. | 85 | ಧರ್ಮಪಾಲ್ ಎಸ್.<br>ಟೈಪ್–4/ 126, ಆರ್.ಟಿ.ಪಿ.ಎಸ್. ಕಾಲೋನಿ, ಶಕ್ತಿನಗರ, ರಾಯಚೂರು ಜಿಲ್ಲೆ–584170. |

| ಕ್ರಮ ಸಂಖ್ಯೆ | ನೋಂದಣಿ ಸಂಖ್ಯೆ | ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ<br>ಶ್ರೀ/ ಶ್ರೀಮತಿ: |
|---|---|---|
| 43. | 90 | ರವೀಂದ್ರ ಆರ್. ತುಳೋಜಿ.<br>C/o. ದೇಶಪಾಂಡೆ ಟೀಚರ್, ಬೆಳಗಳಿ ಆಸ್ಪತ್ರೆ ಹತ್ತಿರ, ವಿದ್ಯಾನಗರ, ಮಹಾಲಿಂಗಪುರ, ಮುಧೋಳ ತಾಲ್ಲೂಕು, ಬಾಗಲಕೋಟೆ–587312. |
| 44. | 91 | ರಾಜೇಶ್,<br>33/1, ಎಸ್‌ಟಿಆರ್‌ಟಿ ಎ.ಸಿ.ಸಿ. ಕಾಲೋನಿ, ವಾಡಿ, ಗುಲ್ಬರ್ಗಾ–585 225. |
| 45. | 97 | ಅನಿಲ್ ಕುಮಾರ್ ಠಾಕೂರ್,<br>ಕ್ಯು. ನಂ. ಎಸ್‌ಟಿಆರ್‌ಟಿ 34/1 ಎ.ಸಿ.ಸಿ. ಕಾಲೋನಿ, ವಾಡಿ, ಗುಲ್ಬರ್ಗಾ–585 225. |
| 46. | 98 | ವೇಣುಗೋಪಾಲ್,<br>ಎಸ್‌ಟಿಆರ್‌ಟಿ 44/4 ಎ.ಪಿ.ಸಿ. ಕಾಲೋನಿ, ವಾಡಿ, ಗುಲ್ಬರ್ಗಾ–585 225 |
| 47. | 99 | ಆರ್. ಶರವಣನ್,<br>ಎಸ್‌ಟಿಆರ್‌ಟಿ 29/1 ಎ.ಸಿ.ಸಿ. ಕಾಲೋನಿ, ವಾಡಿ, ಗುಲ್ಬರ್ಗಾ–585 225. |
| 48. | 102 | ಎಸ್.ಎಲ್. ಧಾನಿ,<br>ಹೆಚ್. ನಂ. ಟೈಪ್ 4/117, ಆರ್.ಟಿ.ಪಿ.ಎಸ್ ಕಾಲೋನಿ, ಶಕ್ತಿನಗರ, ರಾಯಚೂರು ಜಿಲ್ಲೆ–584170. |
| 49. | 104 | ಮಂಜುನಾಥ ಹೆಚ್.ಎಸ್.<br>C/o. ಟಿ. ಶ್ರೀನಿವಾಸ್, ನಂ.389/1, 5ನೇ ಅಡ್ಡರಸ್ತೆ, ಅಮರಾವತಿ, ಹೊಸಪೇಟೆ, ಬಳ್ಳಾರಿ ಜಿಲ್ಲೆ–583 201 |
| 50. | 201 | ಮಂಜುನಾಥ,<br>S/o. ತಿಪ್ಪಯ್ಯ ಎನ್. ಎನ್‌ಜಿಓ ಕ್ವಾರ್ಟರ್ಸ್, ಹೆಚ್ ನಂ.12, ಎಸ್.ವಿ.ಇ.ಎಂ. ಶಾಲೆ ಹತ್ತಿರ, ಕೊಪ್ಪಳ–583 231. |
| 51. | 202 | ಶಾಂತರಾಜ್ ಪಿ.<br>S/o. ಪುಟ್ಟಸ್ವಾಮಿ, ನಂ.58/ಸಿ, 1ನೇ ಸ್ಟೇಜ್, ಗಾಯತ್ರಿಪುರಂ, ಮೈಸೂರು–19. |
| 52. | 204 | ಸತೀಶ್‌ಚಂದ್ರ ವಾಲಿ,<br>C/o. ಎಂ. ನಾಗಪ್ಪ ಅಡ್ವೋಕೆಟ್, ಹೆಚ್.ನಂ. 1–12/ 5, ಭಾಲ್‌ಘಾಟ್ ಕಂಪೌಂಡ್, ಸ್ಟೇಷನ್ ರಸ್ತೆ, ಗುಲ್ಬರ್ಗಾ–585 102. |
| 53. | 206 | ಬಸನಗೌಡ,<br>C/o. ಬಿ.ಎಸ್. ಗಿರಿಯಪ್ಪಗೌಡರ್, ಕಟ್ಟಿ ಬಿಲ್ಡಿಂಗ್, ಪತ್ರಾವಳಿ ಬಿಲ್ಡಿಂಗ್ ಹತ್ತಿರ, 1ನೇ ಕ್ರಾಸ್, ಸಂನ್ಮತಿನಗರ, ಕೆಳಗೇರಿ ರಸ್ತೆ, ಧಾರವಾಡ–580 001. |
| 54. | 213 | ಮಂಜುನಾಥ್ ಹೆಚ್. ಸೊನ್ನದ್,<br>ಟೈಪ್ 6/725, ಆರ್.ಟಿ.ಪಿ.ಎಸ್. ಕಾಲೋನಿ, ಶಕ್ತಿನಗರ ಅಂಚೆ–584 170, ರಾಯಚೂರು ಜಿಲ್ಲೆ. |
| 55. | 214 | ಸೋಮಶೇಖರ್ ಪೇಟಿಮಣಿ,<br>ಬಾಜಾರ್ ರಸ್ತೆ, ಸವದತ್ತಿ–591 126, ಬೆಳಗಾಂ ಜಿಲ್ಲೆ. |
| 56. | 216 | ಎನ್. ರಾಮ್ ಮೋಹನ್,<br>ಬಿ–II/10, ವಿದ್ಯಾನಗರ, ಬಳ್ಳಾರಿ ಜಿಲ್ಲೆ–583 275. |
| 57. | 217 | ಬಾಲಮರುಗನ್,<br>ಸಿ 6/6, ವಿದ್ಯಾನಗರ, ಜೆವಿಎಸ್‌ಎಲ್ ಟೌನ್‌ಶಿಪ್, ತೋರಣಗಲ್ಲು–583 275, ಬಳ್ಳಾರಿ ಜಿಲ್ಲೆ. |
| 58. | 228 | ಜಿ. ಕುಮಾರ್ ಸ್ವಾಮಿ,<br>ಆರ್.ಕೆ. ಪವರ್‌ಜೆನ್ (ಪ್ರೈ) ಲಿ, 5ನೇ ಕ್ರಾಸ್, ಹಿರಿಯೂರು, ಚಳ್ಳಕೆರೆ ರಸ್ತೆ, ಹಿರಿಯೂರು, ಚಿತ್ರದುರ್ಗ. |
| 59. | 234 | ಆರ್. ಧರಣಿ,<br>ನಂ.3ಎ, ಸತ್ತಾನಿ ಗೋಪಾಲಯನ್ ಸ್ಟ್ರೀಟ್, ಪಿಚ್ಚನೂರ್, ಗುಡಿಯಾಥಮ್–632602, ವೇಲೂರು ಜಿಲ್ಲೆ, ತಮಿಳುನಾಡು. |

| ಕ್ರಮ ಸಂಖ್ಯೆ | ನೋಂದಣಿ ಸಂಖ್ಯೆ | ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ<br>ಶ್ರೀ/ ಶ್ರೀಮತಿ: |
|---|---|---|
| 60. | 236 | ಶ್ರೀಕಾಂತ್ ರಾವ್,<br>ಟೈಪ್ 5/143, ಆರ್.ಟಿ.ಪಿ.ಎಸ್. ಕಾಲೋನಿ, ಶಕ್ತಿನಗರ, ಜಿಲ್ಲೆ ರಾಯಚೂರು–585 216. |
| 61. | 242 | ಸಿಂಹಾದ್ರಿ ಶಿವಪ್ರಸಾದ,<br>C/o. ಮೇಧಾ ಗಂಗಣ್ಣ, ಪೆಟ್ರೋಲ್ ಬಂಕ್ ಹತ್ತಿರ, ಪೊತ್ನಾಲ್ ವಿಲೇಜ್, ಮಾನ್ವಿ ತಾಲ್ಲೂಕು, ರಾಯಚೂರು. |
| 62. | 249 | ಸಂತೋಷ ಕುಮಾರ್ ಮಾರುತಿ ತಲನ್‌ದಾಗೆ,<br>ರೂ. ನಂ.26, ಬಿಲ್ಡಿಂಗ್ ನಂ.3, ವಿನಾಯಕ ಸ್ಮೃತಿ, ಉಗರ್‌ಖುರ್ದ್–591 316. |
| 63. | 258 | ಎ.ಎಂ. ಮಲ್ಲಿಕಾರ್ಜುನ,<br>ನಂ.75, 1ನೇ ಮೈನ್, 2ನೇ ಕ್ರಾಸ್, ಕೆ.ಹೆಚ್.ಬಿ. ಕಾಲೋನಿ, ನಂಜನಗೂಡು–571 301. |
| 64. | 262 | ಗಂಗಾಧರ್ ಗಾಳೆಪ್ಪ ಶೆರಿ,<br>ಹೆಚ್. ನಂ.11–45/ 18, ಮಣಿಕೇಶ್ವರಿ ಕಾಲೋನಿ, ಬ್ರಹ್ಮಪುರ, ಗುಲ್ಬರ್ಗಾ–585103. |
| 65. | 265 | ಪವನ್ ಕುಮಾರ್ ಕುಲಕರ್ಣಿ,<br>ಜೆಎಸ್‌ಕ್ಯು–ಡಿ–16/2, ಎಸಿಸಿ ಸ್ಪೋರ್ಟ್ಸ್ ಕ್ಲಬ್ ಹಿಂದೆ, ಎಸಿಸಿ ಕಾಲೋನಿ, ವಾಡಿ ವರ್ಕ್ಸ್, ವಾಡಿ, ಜಿಲ್ಲೆ ಗುಲ್ಬರ್ಗಾ–585 225. |
| 66. | 272 | ಗೌತಮ್ ರಕ್ಷಿತ್ ಬಿನ್ ಶ್ರೀ ಜಲಾಧರ್ ರಕ್ಷಿತ್,<br>ಮನೆ ನಂ.13/469, ಶಿಕ್ಷಿತ್ ನಗರ, ಚರೊಡ, ದುರ್ಗ್, ಛತ್ತಿಸ್‌ಗರ್ ಜಿಲ್ಲೆ. |
| 67. | 273 | ಕೆ.ಇ. ಕೋಸಲ ರಾಮನ್,<br>ಡೀಸಿನ್ ಪ್ರೈವೇಟ್ ಲಿಮಿಟೆಡ್, ಕೇರಾಫ್, ಕೇಶವ್ ಪವರ್ ಪ್ರೈ ಲಿ, ದಲ್ಮಿಯಪುರಂ, ತಿರುಚಿ, ತಮಿಳು ನಾಡು–621 651. |
| 68. | 274 | ಪಿ.ಆರ್. ನಾಗರಾಜನ್,<br>C/o. ಬಾಬುಗೀತಾ, ನಂ.1007, ಕಲೆಕ್ಟರ್ ನಗರ, ಟಿವಿಎಸ್ ಕಾಲೋನಿ, ಅಣ್ಣನಗರ ವೆಸ್ಟ್, ಚೆನ್ನೈ–600 101. |
| 69. | 275 | ಎಸ್. ಕುಮಾರ್,<br>ಸಿ–61, ಆಫೀಸರ್ ಕ್ವಾರ್ಟರ್ಸ್, ದಾಲ್ಮಿಯ ಕಾಲೋನಿ, ದಾಲ್ಮಿಯಪುರಂ, ತಿರುಚಿ–621 651 |
| 70. | 276 | ಕೃಷ್ಣಮೂರ್ತಿ ಜಿ.ಆರ್. ಡೀಸಿನ್ ಪ್ರೈ ಲಿ. ಕೇರಾಫ್ ಕೇಶವ ಪವರ್ ಪ್ರೈ ಲಿ., ದಾಲ್ಮಿಯಪುರಂ, ತಿರುಚಿ, ತಮಿಳು ನಾಡು–621 651. |
| 71. | 277 | ಎಸ್. ಪಳನಿಸಾಮಿ,<br>ಇ–202, ದಾಲ್ಮಿಯ ಕಾಲೋನಿ, ದಾಲ್ಮಿಯಪುರಂ, ತಿರುಚಿ, ತಮಿಳು ನಾಡು. |
| 72. | 280 | ಡಿ. ಸತ್ಯ ಮೂರ್ತಿ,<br>C/o. ವಿ. ಜಯಶಂಕರ, ನಂ.3/150, ವಡಿವೇಲ್‌ನಗರ್, ಮುಂಡಿಯಾಂ ಪಕ್ಕಮ್ (ಪಿಓ), ವಿಲ್ಲುಪುರಂ, ತಮಿಳು ನಾಡು. |
| 73. | 281 | ಎಂ. ಸೆಂಥಿಲ್ ಕುಮಾರನ್,<br>23ಎ/ 37, ಸೇವಾಲೈ ರಸ್ತೆ, ತಿರುಕೊಯ್ಲುರು, ವಿಲ್ಲುಪುರಂ, ತಮಿಳು ನಾಡು–605 757 |
| 74. | 283 | ಶೇಖ್ ಫಿರೋಜ್ ಅಲಿ,<br>ಟೈಪ್ 5/95, ಆರ್.ಟಿ. ಪಿ.ಎಸ್. ಕಾಲೋನಿ, ಶಕ್ತಿನಗರ, ರಾಯಚೂರು. |
| 75. | 290 | ಆನಂದ್ ಮಾರುತಿ ಕಾಂಬ್ಳೆ,<br>ಶ್ರೀ ರೇಣುಕಾ ಶುಗರ್ಸ್ ಲಿ, ಮುನವಳ್ಳಿ, ಸವದತ್ತಿ ತಾಲ್ಲೂಕು, ಬೆಳಗಾಂ–591 117. |
| 76. | 294 | ಪೊಲೂರು ಈಶ್ವರಯ್ಯ,<br>C/o. ಪೆನ್ನಾ ಎಲೆಕ್ಟ್ರಿಸಿಟಿ ಲಿ, ತೇರುಕೊಟೂರು ವಿಲೇಜ್, ವಾಲಂತರವೈ ಅಂಚೆ, ರಾಮನಾದ್ ಜಿಲ್ಲೆ, ತಮಿಳುನಾಡು. |
| 77. | 295 | ಅರುಣ್ ಕುಮಾರ್,<br>ಹೆಚ್. ನಂ.184, ಎಂ.ಆರ್.ಪಿ.ಎಲ್. ಟೌನ್‌ಶಿಪ್, ಕುತ್ತೆತ್ತೂರು ಪೋಸ್ಟ್, ಮಂಗಳೂರು–575030. |

| ಕ್ರಮ ಸಂಖ್ಯೆ | ನೋಂದಣಿ ಸಂಖ್ಯೆ | ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ<br>ಶ್ರೀ/ ಶ್ರೀಮತಿ: |
|---|---|---|
| 78. | 301 | ಸುಭಾಷ್ ಬಿ. ಬುಕಿತ್‌ಗರ್,<br>C/o. ಎಸ್.ಡಿ. ಬುಕಿತ್‌ಗರ್, ಗೋಟಶಿಂಡಿ ಗಲ್ಲಿ, ಅಥಣಿ, ಬೆಳಗಾಂ. |
| 79. | 304 | ಎಸ್. ಬಾಲಮುರುಗನ್,<br>25, ಶಿವನ್‌ಸನ್ನತಿ ಸ್ಟ್ರೀಟ್, ಪೊರಯಾರ್ ಪೋಸ್ಟ್, ನಾಗಪಟ್ಟಣಂ ಜಿಲ್ಲೆ, ತಮಿಳುನಾಡು–609307. |
| 80. | 307 | ಸಂಗಣ್ಣಗೌಡ ಎಸ್. ಬೇವೂರ್,<br>C/o. ಆರ್.ಟಿ. ಉದಗಟ್ಟಿ, ಶಾಂತಿ ನಿಕೇತನ್ ಕಾಲೋನಿ, ಪೊಲೀಸ್ ಸ್ಟೇಷನ್ ಹತ್ತಿರ, ಮಹಾಲಿಂಗಪುರ, ತಾ: ಮುಧೋಳ, ಜಿಲ್ಲೆ: ಬಾಗಲಕೋಟೆ. |
| 81. | 310 | ಸಂತೋಷ್ ನಿಂಗಪ್ಪ ಬಿರಾದರ್,<br>S/o. ಎನ್. ಎಂ. ಬಿರಾದರ್, ಗಂಗ ನಿಲಯ, ಗಣೇಶ್‌ನಗರ, ಇಬ್ರಾಹಿಂಪುರ, ಬಿಜಾಪುರ–586 106 |

ಕಾರ್ಯದರ್ಶಿ, ಬಾಯ್ಲರುಗಳ ಆಪರೇಷನ್
ಇಂಜಿನಿಯರ್ಸ್ ಪರೀಕ್ಷಾ ಮಂಡಳಿ, ಬೆಂಗಳೂರು.

ಪಿ.ಆರ್.905

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇ.ಐ.ಬಿ. ದಾವಣಗೆರೆ ಜಿಲ್ಲೆ, ದಾವಣಗೆರೆ, ಇವರ ನ್ಯಾಯಲಯದಲ್ಲಿ**
**ಪ್ರಕರಣ ಸಂಖ್ಯೆ: ದಾಲುವಿ: ಅಸಇ: ಗುನ್ನೆ ಸಂ: 36: 96–97, ದಿನಾಂಕ:2ನೇ ಫೆಬ್ರವರಿ, 1997**

**ಉಪಸ್ಥಿತರು:** ಬಿ.ವಿ. ಹೂವಪ್ಪಗೌಡ, ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇ.ಐ.ಬಿ. ದಾವಣಗೆರೆ ಜಿಲ್ಲೆ, ದಾವಣಗೆರೆ.

| **ಫಿರ್ಯಾದುದಾರರು** | | **ಆರೋಪಿತರು** |
|---|---|---|
| ಎಲ್.ಎ. ಆದ್ವಾನಿ, ಅಂದಿನ ಅಬಕಾರಿ ಸಬ್‌ಇನ್ಸ್‌ಪೆಕ್ಟರ್, ದಾವಣಗೆರೆ ಉಪವಿಭಾಗ. | **ವಿರುದ್ಧ** | 1) ಹುಗ್ಗಿ ಬಸವರಾಜ್ ಬಿನ್ ತಿಮ್ಮಪ್ಪ, ನಾಯಕ ಜನಾಂಗ, ಯಲವಟ್ಟಿ ಗ್ರಾಮ, ಹರಿಹರ ತಾಲ್ಲೂಕು.<br>2) ಅರ್ಜಿದಾರ: ಹನುಮಂತಪ್ಪ ಬಿನ್ ತಿಮ್ಮಪ್ಪ, ಯಲವಟ್ಟಿ ಹರಿಹರ ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:12.02.1997 ರಂದು ಅಬಕಾರಿ ಉಪ ನಿರೀಕ್ಷಕರು, ದಾವಣಗೆರೆ ಉಪ ವಿಭಾಗ, ಇವರು ಸಿಬ್ಬಂದಿಯೊಂದಿಗೆ ಕರ್ತವ್ಯ ನಿರ್ವಹಿಸುತ್ತಿದ್ದಾಗ ಬಂದ ಬಾತ್ಮಿಯ ಮೇರೆಗೆ ಪಂಚರೊಂದಿಗೆ ರಸ್ತೆ ಕಾವಲು ಮಾಡುತ್ತಿದ್ದಾಗ ಹರಿಹರ ತಾಲ್ಲೂಕು, ಕುಂಬಳೂರು ಜಿಗಳಿ ಕ್ರಾಸ್ ಬಳಿ ರಾತ್ರಿ 10.00 ಗಂಟೆ ಸಮಯದಲ್ಲಿ ಬಜಾಜ್ ಕವಾಸಾಕಿ ಸಂಖ್ಯೆ: ಕೆಎ–13–1535 ರಲ್ಲಿ ಸರ್ಕಾರಕ್ಕೆ ತೆರಿಗೆ ಕೊಡದೆ 8.640 ಲೀಟರ್ ಮದ್ಯದ ದಾಸ್ತಾನನ್ನು ಸಾಗಾಟ ಮಾಡುತ್ತಿದ್ದುದನ್ನು ಪತ್ತೆ ಮಾಡಿ ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 11, 14ರ ಉಲ್ಲಂಘನೆ ಮತ್ತು ಸದರಿ ಕಾಯ್ದೆಯ ಕಲಂ 32, 34, 38(ಎ) ಹಾಗೂ 43(ಎ) ರ ಪ್ರಕಾರ ಅಪರಾಧವಾದ್ದರಿಂದ ವಾಹನ ಮತ್ತು ಮದ್ಯವನ್ನು ಜಪ್ತಿ ಮಾಡಿ ಹುಗ್ಗಿ ಬಸವರಾಜ್ ತಂದೆ ಹನುಮಂತಪ್ಪ, ನಾಯಕ ಜನಾಂಗ, ಯಲವಟ್ಟಿ ಗ್ರಾಮ, ಹರಿಹರ ತಾಲ್ಲೂಕು, ಇವರ ವಿರುದ್ಧ ಪ್ರಕರಣ ದಾಖಲು ಮಾಡಿರುತ್ತಾರೆ. ವಾಹನವನ್ನು ಮತ್ತು ದಾಖಲಾತಿಗಳನ್ನು ಮುಂದಿನ ತನಿಖೆಗಾಗಿ ಅಬಕಾರಿ ಉಪ ನಿರೀಕ್ಷಕರು, ಹರಿಹರ ಉಪವಲಯ, ಇವರಿಗೆ ಹಸ್ತಾಂತರಿಸಿರುತ್ತಾರೆ.

ದಿನಾಂಕ:26.02.1997 ರಂದು ಹನುಮಂತಪ್ಪ ಬಿನ್ ತಿಮ್ಮಪ್ಪ, ಯಲವಟ್ಟಿ, ಜಿಗಳಿ ಅಂಚೆ, ಹರಿಹರ ತಾಲ್ಲೂಕು, ಇವರು ವಕೀಲರ ಮೂಲಕ ಅರ್ಜಿ ಸಲ್ಲಿಸಿ ವಾಹನವನ್ನು ಬಿಡುಗಡೆ ಮಾಡಿಕೊಡಲು ಕೋರಿರುವ ಕಾರಣ ರೂ.10,000–00 ಗಳ ಬ್ಯಾಂಕ್ ಗ್ಯಾರಂಟಿ ಅಷ್ಟೇ ಮೊತ್ತಕ್ಕೆ ಸಲ್ಲಿಸಿರುವ ಸಾಲ್ವೆಂಟ್ ಷ್ಯೂರಿಟಿಯನ್ನು ಪಡೆದು ಸಲ್ಲಿಸಿದಲ್ಲಿ ವಾಹನವನ್ನು ತಾತ್ಕಾಲಿಕವಾಗಿ ಬಿಡುಗಡೆಗೊಳಿಸುವುದಾಗಿ ದಿನಾಂಕ:16.04.1997ರಲ್ಲಿ ಆದೇಶಿಸಲಾಗಿತ್ತು. ನಂತರ ಮಾನ್ಯ ಜಿಲ್ಲಾ ಸೆಷನ್ ನ್ಯಾಯಾಲಯದ ಆದೇಶದನ್ವಯ 10,000–00 ರೂ.ಗಳ ಷ್ಯೂರಿಟಿಯನ್ನು ಪಡೆದು ವಾಹನವನ್ನು ತಾತ್ಕಾಲಿಕವಾಗಿ ಮಾಲೀಕರ ವಶಕ್ಕೆ ಬಿಡುಗಡೆಗೊಳಿಸಲಾಗಿತ್ತು.

ಈ ಪ್ರಕರಣದ ವಿಚಾರಣೆ ನಡೆಸಲು ಪ್ರಾಧಿಕಾರದ ಮುಂದೆ ಹಾಜರಾಗಲು ವಾಹನದ ಮಾಲೀಕರಿಗೆ ಅನೇಕ ಬಾರಿ ನೋಟೀಸುಗಳನ್ನು ನೀಡಿದ್ದರೂ, ಅವರು ಹಾಜರಾಗಿರುವುದಿಲ್ಲ. ಸದರಿಯವರಿಗೆ ಈ ಕಛೇರಿಯಿಂದ ದಿನಾಂಕ:29.12.2006 ರಂದು ನೋಟೀಸನ್ನು ನೀಡಿ ಈ ನೋಟೀಸ್‌ನ್ನು ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ಹರಿಹರ ತಾಲ್ಲೂಕು, ಇವರ ಮುಖಾಂತರ ಜಾರಿಗೊಳಿಸಲಾಗಿತ್ತು. ವಾಹನದ ಮಾಲೀಕರಾದ ಶ್ರೀ ಹೆಚ್. ಹನುಮಂತಪ್ಪ ಇವರು ಈ ಪ್ರಾಧಿಕಾರದ ಮುಂದೆ ದಿನಾಂಕ:21.03.2007ರಂದು ಹಾಜರಾಗಿ ಈ ಮೊಕದ್ದಮೆಯನ್ನು ನಡೆಸಲು ಸಾಧ್ಯವಾಗುತ್ತಿಲ್ಲ ಹಾಗೂ ವಾಹನವು ತುಂಬಾ ಹಳೆಯದಾಗಿದ್ದು ತುಕ್ಕು ಹಿಡಿದಿದ್ದು ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಲು ಸಾಧ್ಯವಾಗುತ್ತಿಲ್ಲವಾಗಿ ತಿಳಿಸಿರುತ್ತಾರೆ. ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯಾವುದೇ ಅಭ್ಯಂತರ ಇರುವುದಿಲ್ಲವೆಂದು ಲಿಖಿತ ಮನವಿ ಸಲ್ಲಿಸಿರುತ್ತಾರೆ.

ಈ ಪ್ರಕರಣವು ಸುಮಾರು 10 ವರ್ಷಗಳ ಹಳೆಯದಾಗಿದ್ದು ವಾಹನದ ಮಾಲೀಕರು ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಲು ಯಾವುದೇ ಅಭ್ಯಂತರವಿಲ್ಲವಾಗಿ ತಿಳಿಸಿರುತ್ತಾರೆ. ಈ ಪ್ರಕರಣದಲ್ಲಿನ ಎಲ್ಲಾ ದಾಖಲಾತಿಗಳು ಹಾಗೂ ವಾಹನದ ಮಾಲೀಕರ ಲಿಖಿತ ಮನವಿಯನ್ನು ಪರಿಶೀಲಿಸಲಾಗಿ ವಾಹನದ ಮಾಲೀಕರಿಗೆ ಈ ಪ್ರಕರಣ ನಡೆಸಲು ಆಸಕ್ತಿಯಿಲ್ಲವೆಂದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುತ್ತದೆ.

ವಾಹನದ ಮಾಲೀಕರು ವಾಹನ ಸಂಖ್ಯೆ: ಕೆಎ–17–1535ರ ಸ್ಕೂಟರಿನಲ್ಲಿ ಸರ್ಕಾರಕ್ಕೆ ತೆರಿಗೆ ವಂಚಿಸಿ ಸೂಕ್ತ ದಾಖಲಾತಿಗಳಿಲ್ಲದೆ ಅದರಲ್ಲಿ ಅಕ್ರಮವಾಗಿ ಮದ್ಯಸಾಗಾಣಿಕೆ ಮಾಡಿರುವುದು ದೃಢಪಟ್ಟಿರುತ್ತದೆ. ಈ ಪ್ರಕರಣದ ಬಗ್ಗೆ ಸಹಾಯಕ ಅಭಿಯೋಜಕರು ಅಭಿಪ್ರಾಯ ನೀಡುತ್ತಾ ವಾಹನದ ಮಾಲೀಕರು ಪ್ರಕರಣ ನಡೆಸಲು ಆಸಕ್ತಿ ತೋರಿಸದೆ ಇದ್ದುದರಿಂದ ಹಾಗೂ ಲಭ್ಯವಿರುವ ದಾಖಲಾತಿಗಳನ್ವಯ ವಾಹನದಲ್ಲಿ ಅಕ್ರಮ ಮದ್ಯ ಸಾಗಾಣಿಕೆ ಮಾಡಿ ಅಬಕಾರಿ ಕಾಯ್ದೆ ಉಲ್ಲಂಘಿಸಿರುವುದು ಸ್ಪಷ್ಟವಾಗಿರುವುದರಿಂದ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಬಹುದಾಗಿ ವಾದ ಮಂಡಿಸಿರುತ್ತಾರೆ. ಈ ಎಲ್ಲಾ ಕಾರಣಗಳಿಂದಾಗಿ ಈ ಪ್ರಕರಣದಲ್ಲಿ ಜಪ್ತಿ ಮಾಡಿದ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಬಹುದಾಗಿದ್ದು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಇಎಕ್ಸ್‌ಇ: ಡಿಟಿಸಿಆರ್: 432: 96–97, ದಿನಾಂಕ:28ನೇ ಮಾರ್ಚ್, 2007**

ಬಿ.ವಿ. ಹೂವಪ್ಪಗೌಡ, ಪ್ರಾಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ಇ.ಐ.ಬಿ. ದಾವಣಗೆರೆ ಜಿಲ್ಲೆ, ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು, ದಾವಣಗೆರೆ ಉಪವಿಭಾಗ, ಇವರು ದಾಖಲಿಸಿದ ಗುನ್ನೆ ಸಂಖ್ಯೆ: 36: 96–97, ದಿನಾಂಕ:02.02.1997ರ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಸಂಖ್ಯೆ: ಕೆಎ–17–1535 ಕವಾಸಾಕಿ ಬಜಾಜ್‌ನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಜಿ) ಅಡಿಯಲ್ಲಿ ಅನುಸರಿಸಬೇಕಾದ ನಿಯಮಗಳನ್ನು ಅನುಸರಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಈಗಾಗಲೇ ಪ್ರಕರಣದಲ್ಲಿ ಜಪ್ತಿ ಮಾಡಲಾದ ಮದ್ಯವನ್ನು ವಿಲೇವಾರಿ ಮಾಡಲಾದ ಕ್ರಮವನ್ನು ಸಿಂಧುಗೊಳಿಸಲಾಗಿದೆ.

ಈ ಆದೇಶವನ್ನು ಇಂದು ದಿನಾಂಕ:28.03.2007ರಂದು ಬೆರಳಚ್ಚುಗಾರರಿಗೆ ಉಕ್ತಲೇಖನ ಕೊಟ್ಟು ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

ಪ್ರಾಧಿಕೃತ ಅಧಿಕಾರಿಗಳು ಹಾಗೂ
ಅಬಕಾರಿ ಅಧೀಕ್ಷಕರು, ಇ.ಐ.ಬಿ. ದವಣಗೆರೆ ಜಿಲ್ಲೆ,
ದಾವಣಗೆರೆ.

ಪಿ.ಆರ್.444

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ–ಉಪ–ವಿಭಾಗ, ಮಧುಗಿರಿ ಇವರ ಕಛೇರಿ ನಡವಳಿಕೆಗಳು**

**ಅಮಲ್ಜಾರಿ ಅರ್ಜಿ ಸಂಖ್ಯೆ: 443:97–98**

| **ಡಿಕ್ರಿ ಹೋಲ್ಡರ್:** | | **ತೀರ್ಪುಋಣಿ:** |
|---|---|---|
| ಪ್ರಧಾನ ವ್ಯವಸ್ಥಾಪಕರು, ಟೌನ್ ಕೋ-ಆಪರೇಟೀವ್ ಬ್ಯಾಂಕ್ ಲಿ., ಶಿರಾ, ತುಮಕೂರು ಜಿಲ್ಲೆ. | **ವಿರುದ್ಧ** | ಸುಶೀಲಮ್ಮ ಕೋಂ ಮಾಲಿ ಪ್ರಕಾಶ್ ಮೈನ್ ರೋಡ್, ಶಿರಾ. |

**ಪ್ರಸ್ತಾವನೆ:**

ಪ್ರಧಾನ ವ್ಯವಸ್ಥಾಪಕರು ಟೌನ್ ಕೋ–ಆಪರೇಟೀವ್ ಬ್ಯಾಂಕ್ ಲಿ., ಶಿರಾ ತುಮಕೂರು ಜಿಲ್ಲೆ ಇವರು ತೀರ್ಪು ಋಣಿಯಿಂದ ವಸೂಲಾಗಬೇಕಾದ ಆಧಾರದ ಸಾಲ ರೂ.45,556–00 ದಾವಾ ಶುಲ್ಕ ರೂ.165–00 ಮತ್ತು ಮುಂದುವರೆದ ಬಡ್ಡಿ ಇತರೆ ಖರ್ಚುಗಳಿಗೆ ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು ಬೆಂಗಳೂರು ವಿಭಾಗ, ಬೆಂಗಳೂರು ಇವರ ನ್ಯಾಯಾಲಯದಲ್ಲಿ ದಾವಾ ಹೂಡಿ ಡಿಕ್ರಿ ಅಮಲ್ಜಾರಿ ಅರ್ಜಿ ಹಾಕಿದ್ದು ಸದರಿ ಅಮಲ್ಜಾರಿ ಅರ್ಜಿ ಸಂಖ್ಯೆ: 443: 97–98 ಮೊಬಲಗು ರೂ.48986–00ರ ಪ್ರಕರಣವನ್ನು ಸದರಿ ಬ್ಯಾಂಕಿನ ನಿಯಮ 441 ಮಾರಾಟಾಧಿಕಾರಿಯವರಿಗೆ ಅಮಲ್ಜಾರಿಗೆ ವಹಿಸಲಾಗಿತ್ತು. ಈಗ ದಿನಾಂಕ:10.01.2007ಕ್ಕೆ ರೂ.143896–00 ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ತೀರ್ಪುಋಣಿದಾರರಿಂದ ಬರಬೇಕಾಗಿರುತ್ತದೆ.

ಮಾರಾಟಾಧಿಕಾರಿಗಳು ತೀರ್ಪು ಋಣಿಯ ಸ್ಥಿರ ಸ್ವತ್ತುಗಳನ್ನು ದಿನಾಂಕ:10.01.2007 ರಂದು ಬಹಿರಂಗ ಹರಾಜಿನಲ್ಲಿ ಅತ್ಯಧಿಕ ಬಿಡ್ಡುದಾರರಾದ ಶ್ರೀ ಎಸ್.ಎಂ. ಶ್ರೀಧರ ಬಿನ್ ಮೂರ್ತಿರಾವ್ ಶಿರಾ ಇವರಿಗೆ ನಿವೇಶನವನ್ನು ರೂ.62000–00 (ರೂಪಾಯಿಗಳು–ಅರವತ್ತೆರಡು ಸಾವಿರ ಮಾತ್ರ) ಗಳಿಗೆ ಮಾರಾಟ ಮಾಡಿ ಹರಾಜು ಸ್ಥಿರೀಕರಣಕ್ಕಾಗಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಸ್ವತ್ತು ಹರಾಜಾದ 30 ದಿವಸಗಳ ಒಳಗೆ ಆಸ್ತಿಯ ಒಡೆತನವನ್ನು ಹೊಂದಿರುವ ಅಥವಾ ಆಸ್ತಿಯ ಹಿತಾಸಕ್ತಿ ಹೊಂದಿರುವ ವ್ಯಕ್ತಿಗಳಿಂದ ಸಹಕಾರಿ ಕಾಯದೆ ನಿಯಮ 38(4) (ಎ) ರೀತಿ ನಿಯಮಾನುಸಾರ ಠೇವಣಿ ಮಾಡಿ ಮಾರಾಟವನ್ನು ರದ್ದುಗೊಳಿಸುವಂತೆ ಕೋರಿ ಯಾವ ವಿಧವಾದ ಅರ್ಜಿಯು ಬಂದಿಲ್ಲದ ಪ್ರಯುಕ್ತ ಸದರಿ ಸ್ಥಿರಾಸ್ತಿಯನ್ನು ಅತ್ಯಧಿಕ ಹಾಗೂ ಅಂತಿಮ ಬಿಡ್ಡುದಾರರ ಹೆಸರಿಗೆ ಸ್ಥಿರೀಕರಣಗೊಳಿಸಬೇಕಾಗಿದೆ. ಆದುದರಿಂದ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸ.ಸಂ.ಸ.ನಿ. 33: ಎಬಿಎನ್: ಎಸ್.ಸಿ:16: 2007–08, ದಿನಾಂಕ:24ನೇ ಜುಲೈ, 2007**

ಹೆಚ್.ಡಿ. ಶಿವಣ್ಣ, ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪ ವಿಭಾಗ ಮಧುಗಿರಿ ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಬಂಧನೆಗಳ 1960 ರ ನಿಯಮ 38(6)(ಎ) ಪ್ರಕಾರ ನನಗೆ ದತ್ತವಾಗಿರುವ ಅಧಿಕಾರದ ಮೇರೆಗೆ ಶಿರಾ ಟೌನ್ ಕೋ–ಆಪರೇಟೀವ್ ಬ್ಯಾಂಕ್ ಲಿ. ಶಿರಾ ಇವರಿಗೆ ತೀರ್ಪು ಋಣಿಗಳಾದ ಸುಶೀಲಮ್ಮ ಕೋಂ ಮಾಲಿ ಪ್ರಕಾಶ, ಮೈನ್‌ರೋಡ್, ಶಿರಾ ಇವರ ಷೆಡ್ಯೂಲ್‌ನಲ್ಲಿ ವಿವರಿಸಲಾದ ಸ್ಥಿರಾಸ್ತಿಗಳನ್ನು ದಿನಾಂಕ:10.01.2007ರಂದು ನಡೆದ ಬಹಿರಂಗ ಹರಾಜಿನಲ್ಲಿ ಅತ್ಯಧಿಕ ಬಿಡ್‌ದಾರರಾದ ಶ್ರೀ ಎಸ್.ಎಂ ಶ್ರೀಧರ್ ಬಿನ್ ಮೂರ್ತಿರಾವ್ ಪಿ.ಟಿ. ರಸ್ತೆ, ಶಿರಾ, ಇವರ ಹೆಸರಿಗೆ ಸ್ಥಿರೀಕರಿಸಿ ಆದೇಶಿಸಿರುತ್ತೇನೆ.

ಬಹಿರಂಗ ಹರಾಜಿನಲ್ಲಿ ಬಿಡ್ಡುದಾರ ಎಸ್.ಎಂ. ಶ್ರೀಧರ ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ಪಾವತಿಸಿದ ರೂ.62000–00 ಗಳಲ್ಲಿ ಡಿಕ್ರಿ ಹೋಲ್ಡರ್ ಬ್ಯಾಂಕ್ ಮಾರಾಟದ ಘೋಷಣೆಯಲ್ಲಿ ಯಾವ ಮೊಬಲಗಿನ ವಸೂಲಿಯ ಸಲುವಾಗಿ ಮಾರಾಟವು ಆದೇಶ ಮಾಡಲ್ಪಟ್ಟಿತ್ತೋ ಆ ಮೊಬಲಗನ್ನು ಮತ್ತು ಅದರ ಮೇಲಿನ ಬಡ್ಡಿ ಮತ್ತು ಜಪ್ತಿ ವೆಚ್ಚಗಳನ್ನು ತೀರ್ಪುಋಣಿ ಶ್ರೀಮತಿ ಸುಶೀಲಮ್ಮ ಇವರ ಸಾಲದ ಖಾತೆಗೆ ಜಮ ತೆಗೆದುಕೊಂಡು ಲೆಕ್ಕ ಮಾಡಿಕೊಳ್ಳಲು ಪ್ರಧಾನ ವ್ಯವಸ್ಥಾಪಕರಿಗೆ ಆದೇಶಿಸಿದೆ.

**ಸ್ಥಿರ ಸ್ವತ್ತುಗಳ ವಿವರ**

ಶಿರಾ ಟೌನ್ ಮಾರುತಿನಗರದಲ್ಲಿರುವ ನಿವೇಶನದ ಆಸೆಸ್‌ಮೆಂಟ್ ನಂ.10157:14 ಅಳತೆ 40x32 ಅಡಿಗಳುಳ್ಳ ನಿವೇಶನ ಈ ನಿವೇಶನಕ್ಕೆ ಚೆಕ್ಕು ಬಂದಿ ಪೂರ್ವಕ್ಕೆ ಸ್ವಂತ ಸೈಟು, ಪಶ್ಚಿಮಕ್ಕೆ: ರಸ್ತೆ, ಉತ್ತರಕ್ಕೆ:ಚೆನ್ನಪ್ಪನವರ ಜಮೀನು, ದಕ್ಷಿಣಕ್ಕೆ: ಸಿದ್ದಣ್ಣನ ಸೈಟು.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮೊಹರಿನೊಂದಿಗೆ 2007ನೇ ಇಸವಿ ಜುಲೈ ತಿಂಗಳು 24ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಮಧುಗಿರಿ ಉಪವಿಭಾಗ, ಮಧುಗಿರಿ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ–ಉಪ–ವಿಭಾಗ, ಮಧುಗಿರಿ ಇವರ ಕಛೇರಿ ನಡವಳಿಕೆಗಳು**

**ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38(7)ರ ಅನ್ವಯ ನೀಡಿದ ಮಾರಾಟ ದೃಢೀಕರಣ ಪತ್ರ**

**ಅಮಲ್ಜಾರಿ ಅರ್ಜಿ ಸಂಖ್ಯೆ: 443/97–98**

**ಉಪಸ್ಥಿತರು:** ಹೆಚ್.ಡಿ. ಶಿವಣ್ಣ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ.

**ಡಿಕ್ರಿ ಹೋಲ್ಡರ್:**
ಪ್ರಧಾನ ವ್ಯವಸ್ಥಾಪಕರು, ಟೌನ್ ಕೋ–ಆಪರೇಟೀವ್ ಬ್ಯಾಂಕ್ ಲಿ., ಶಿರಾ, ತುಮಕೂರು ಜಿಲ್ಲೆ.

**ತೀರ್ಪುಋಣಿ:**
ಸುಶೀಲಮ್ಮ ಕೋಂ ಮಾಲಿ ಪ್ರಕಾಶ್ ಮೈನ್ ರೋಡ್, ಶಿರಾ.

ಟೌನ್ ಕೋ–ಆಪರೇಟೀವ್ ಬ್ಯಾಂಕ್ ಲಿ., ಶಿರಾ, ತುಮಕೂರು ಜಿಲ್ಲೆ ಇವರು ದಿನಾಂಕ:23.12.1996ರಂದು ಪಡೆದ ಡಿಕ್ರಿ ನಂ.881: 96–97ರ ಪ್ರಕಾರ ದಿನಾಂಕ:29.04.1997ರಂದು ಸಿ.ಇ.ಪಿ. ನಂ.443: 97–98ರ ಪ್ರಕಾರ ಅಮಲ್ಜಾರಿ ಪಡೆದು ಡಿಕ್ರಿ ಹೋಲ್ಡರ್ ಬ್ಯಾಂಕಿನ ಮಾರಾಟಾಧಿಕಾರಿಯು ಮೇಲ್ಕಂಡ ತೀರ್ಪು ಋಣಿದಾರರಾದ ಶ್ರೀಮತಿ ಸುಶೀಲಮ್ಮ ಕೋಂ. ಮಾಲಿ ಪ್ರಕಾಶ್, ಮೈನ್ ರೋಡ್, ಶಿರಾ ಇವರು ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ಆಧಾರ ಮಾಡಿದ್ದ ಈ ಕೆಳಕಂಡ ಸ್ಥಿರಾಸ್ತಿಯನ್ನು ದಿನಾಂಕ:10.01.2007 ರಂದು ಟೌನ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಶಿರಾ ಈ ಬ್ಯಾಂಕಿಗೆ ಬರಬೇಕಾದ ಸುಸ್ತಿ ಸಾಲದ ವಸೂಲಿ ಬಗೆಗೆ ಬಹಿರಂಗ ಹರಾಜು ನಡೆಸಿರುತ್ತಾರೆ.

ಈ ಬಹಿರಂಗ ಹರಾಜಿನಲ್ಲಿ ತೀರ್ಪುಋಣಿಯ ಸ್ಥಿರ ಸ್ವತ್ತನ್ನು ಶ್ರೀ ಎಸ್.ಎಂ. ಶ್ರೀಧರ ಬಿನ್ ಮೂರ್ತಿರಾವ್ ಪಿ.ಟಿ. ರಸ್ತೆ, ಶಿರಾ, ತುಮಕೂರು ಜಿಲ್ಲೆ ಇವರು ರೂ.62000–00 (ರೂಪಾಯಿಗಳು ಅರವತ್ತೆರಡು ಸಾವಿರ ಮಾತ್ರ) ಗಳ ಅತಿ ಹೆಚ್ಚಿನ ಬಿಡ್ ಮೊತ್ತಕ್ಕೆ ಕೊಂಡಿರುತ್ತಾರೆ ಎಂದು ಈ ಮೂಲಕ ದೃಢೀಕರಿಸಿದೆ. ಆದ್ದರಿಂದ ಈ ಸ್ಥಿರಾಸ್ತಿಯನ್ನು ಹರಾಜನ್ನು ಬಿಡ್‌ದಾರರಾದ ಶ್ರೀ ಎಸ್.ಎಂ. ಶ್ರೀಧರ ಬಿನ್ ಮೂರ್ತಿರಾವ್ ಇವರ ಹೆಸರಿಗೆ ಸ್ಥಿರೀಕರಣಗೊಳಿಸಿದೆ.

**ಸ್ಥಿರಾಸ್ತಿಯ ವಿವರ**

| ಕ್ರ. ಸಂ. | ಗ್ರಾಮ ಮತ್ತು ತಾಲ್ಲೂಕು | ಸ್ಥಿರ ಸ್ವತ್ತುಗಳ ವಿವರ ತರಹೆ | ಖಾವೇಷು ಮಾರಿ ನಂ. | ಖಾತೆದಾರನ ಹೆಸರು | ವಿಸ್ತೀರ್ಣ | ಚೆಕ್ಕುಬಂದಿ |
|---|---|---|---|---|---|---|
| 1. | ಮಾರುತಿ ನಗರ ಶಿರಾ ಟೌನ್ | ನಿವೇಶನ | 10157:14 | ಸುಶೀಲಮ್ಮ ಕೋಂ ಮಾಲಿ ಪ್ರಕಾಶ ಮೈನ್ ರೋಡ್, ಶಿರಾ. | 40x32 ಅಡಿಗಳು | ಪೂರ್ವಕ್ಕೆ: ಸ್ವಂತ ಸೈಟು<br>ಪಶ್ಚಿಮಕ್ಕೆ: ರಸ್ತೆ<br>ಉತ್ತರಕ್ಕೆ: ಚನ್ನಪ್ಪನವರ ಜಮೀನು.<br>ದಕ್ಷಿಣಕ್ಕೆ: ಸಿದ್ದಣ್ಣನ ಸೈಟು |

**ಮಾರಾಟದ ಮೊತ್ತ ರೂ.62000–00, ಮಾರಾಟದ ದಿನಾಂಕ:10.01.2007, ನಿಗದಿತ ಮುದ್ರಾಂಕ ಶುಲ್ಕ ರೂ.5208–00**

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮೊಹರಿನೊಂದಿಗೆ ಈ ದಿನ ದಿನಾಂಕ:24.07.2007 ರಂದು ನೀಡಿರುತ್ತೇನೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಮಧುಗಿರಿ ಉಪವಿಭಾಗ, ಮಧುಗಿರಿ.

ಪಿ.ಆರ್.991